KA / BG-GPO/2515/WPP-47/2009-2011



# ಕರ್ನಾಟಕ ರಾಜ್ಯಪತ್ರ


ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಜೂನ್ ೪, ೨೦೦೯ (ಜೇಷ್ಠ ೧೪, ಶಕ ವರ್ಷ ೧೯೩೧) | ಸಂಚಿಕೆ ೨೩ |
|---|---|---|


## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಸಹಕಾರ ಇಲಾಖೆ

**ಸಹಕಾರ ಸಂಘಗಳ ಉಪ ನಿಬಂಧಕರವರು, ದಾವಣಗೆರೆಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಗಳು**

**ವಿಷಯ:** ಸಮಾಪನೆಗೊಂಡಿರುವ ವಿನಾಯಕ ನಗರ ವಿವಿಧೋದ್ದೇಶ ಸಹಕಾರ ಸಂಘ ನಿ. ದಾವಣಗೆರೆ, ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:**1) ಈ ಕಛೇರಿ ಆದೇಶ ಸಂಖ್ಯೆ: ಡಿಆರ್/ಡಿವಿಜಿ/ಸಮಾಪನೆ/ಸಿಆರ್–48/02–03, ದಿನಾಂಕ:27.01.2003.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪತ್ರ ದಿನಾಂಕ:18.12.2008.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ನೋಂದಣಿ ಸಂಖ್ಯೆ:ಎಆರ್–31/ನೋಂದಣಿ/18651/18651/93–94, ದಿನಾಂಕ:15.04.1993ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ದಿನಾಂಕ:27.01.2003ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, ವೃತ್ತ–2, ಸಹಾಯಕ ನಿಬಂಧಕರ ಕಛೇರಿ, ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2)ರ ರೀತ್ಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್:ಡಿವಿಜಿ/ಸಮಾಪನೆ/ ಸಿಆರ್–48/2002–03, ದಿನಾಂಕ:27ನೇ ಡಿಸೆಂಬರ್, 2008**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರ ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001, ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ವಿನಾಯಕ ನಗರ ವಿವಿಧೋದ್ದೇಶ ಸಹಕಾರ ಸಂಘ ನಿ., ದಾವಣಗೆರೆ, ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ಥಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ

ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:27.12.2008 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.42

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ:12/08–09, ದಿನಾಂಕ:20ನೇ ಡಿಸೆಂಬರ್, 2008**

**ಉಪಸ್ಥಿತರು:** ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಫಿರ್ಯಾದಿದಾರರು:** ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು:** 1) ಗಣಪತಿ 2) ಜಿ. ವೆಂಕಟೇಶ, 3) ಸತೀಶ

**ಬಾಧ್ಯತೆದಾರರು:** ಯಾರೂ ಹಕ್ಕು ಬಾಧ್ಯತೆ ಅರ್ಜಿ ಸಲ್ಲಿಸಿಲ್ಲ.

**ಪ್ರಸ್ತಾವನೆ:**

ದಿನಾಂಕ:23.07.2008ರಂದು ವಲಯ ಅರಣ್ಯಾಧಿಕಾರಿ, ಆನವಟ್ಟಿ ಮತ್ತು ಸಿಬ್ಬಂದಿಯವರು ಸೊರಬ ತಾಲ್ಲೂಕು ಆನವಟ್ಟಿ ಹೋಬಳಿ ಸಮನವಳ್ಳಿ ಗ್ರಾಮದ ಸಮೀಪ ಕುಪ್ಪಗಡ್ಡೆ ಮಾರ್ಗವಾಗಿ ಇಲಾಖಾ ಜೀಪು ಕೆಎ–15–ಜಿ–124ರಲ್ಲಿ ಗಸ್ತು ಮಾಡುತ್ತಿರುವಾಗ ಸಂಜೆ ಸುಮಾರು 6–15ರ ಸಮಯದಲ್ಲಿ ಮೇಲ್ಕಂಡ ಸ್ಥಳದಲ್ಲಿ ವಾಹನವೊಂದು ಬರುತ್ತಿರುವುದನ್ನು ತಡೆದು ತಪಾಸಣೆ ಮಾಡಲಾಗಿ ವಾಹನದಲ್ಲಿ ನಾಟಾದ ತುಂಡುಗಳಿರುವುದು ಕಂಡುಬಂದಿದ್ದು, ವಾಹನದಲ್ಲಿದ್ದ ಚಾಲಕ ಮತ್ತು ಎರಡು ಜನ ಆಸಾಮಿಗಳನ್ನು ವಿಚಾರಿಸಲಾಗಿ ಈ ನಾಟಾ ಸಾಗಿಸಲು ರಹದಾರಿ ಇಲ್ಲವೆಂದು ತಿಳಿಸಿದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಇಲಾಖೆಯವರೇ ಪಂಚಾಯ್ತಿದಾರರಾಗಿ ಮಹಜರ್ ಕ್ರಮ ಜರುಗಿಸಿ ಅರಣ್ಯ ಉತ್ಪನ್ನವನ್ನು ಅಳತೆ ಮಾಡಿ ನಂಬರ್ ಕೊಟ್ಟು, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯೊಂದಿಗೆ ವಾಹನ 407 ಮಿನಿಲಾರಿ ಕೆಎ–15–1002 ಮತ್ತು ಹೊನ್ನೆ ನಾಟಾ 15=1.845ಎಂ3ನ್ನು ಮತ್ತು ಆಸಾಮಿಗಳಾದ 1) ಗಣಪತಿ ಆಚಾರ್ ಬಿನ್ ಗೋವಿಂದ ಆಚಾರ್ 38 ವರ್ಷ ಮಾಸೂರು ಗ್ರಾಮ ಸಾಗರ ತಾಲ್ಲೂಕು, 2) ಜಿ. ವೆಂಕಟೇಶ ಬಿನ್ ಗೋವಿಂದಪ್ಪ 42 ವರ್ಷ ಮೂಕಾಂಬಿಕ ರಸ್ತೆ, ಸಾಗರ ಪಟ್ಟಣ, 3) ಕೆ. ಸತೀಶ ಬಿನ್ ಚೌಡಪ್ಪ 35 ವರ್ಷ ಚಾಲಕ ಸಿದ್ದೇಶ್ವರ ಶಾಲೆ ಸಮೀಪ ಸಾಗರ ಪಟ್ಟಣ ಇವರನ್ನು ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 33, 62, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಆನವಟ್ಟಿ ವಲಯದ ಅ.ಮೊ.ಸಂ.34/08–09ನ್ನು ದಾಖಲಿಸಿ, ನಂತರ ಆಸಾಮಿಗಳನ್ನು ಜೆ.ಎಂ.ಎಫ್.ಸಿ. ಸೊರಬಕ್ಕೆ ಒಪ್ಪಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿನಾಂಕ;25.07.2008ರಂದು ಆದೇಶವಾಗಿದೆ.

ನಂತರ ವಾಹನದ "ಬಿ" ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಸಾಗರ ಇವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ:ಬಿ3:ಅಮೊ:ವಾಹನ–12/08–09, ದಿನಾಂಕ:06.08.2008ರಂದು ಕೋರಲಾಗಿತ್ತು. ಅದರಂತೆ ಈ ವಾಹನದ "ಬಿ" ಪ್ರತಿಯನ್ನು ಸಾರಿಗೆ ಅಧಿಕಾರಿ, ಸಾಗರ ಇವರ ಕಛೇರಿ ಪತ್ರ ಸಂಖ್ಯೆ: ಸಪ್ರಾಸಾಅ/ ಸಾಗರ/ ಬಿವಹಿ/ ಕೆಎ–15–1002/08–09, ದಿನಾಂಕ:08.08.2008ರ ಪತ್ರದಲ್ಲಿ ದಿನಾಂಕ:22.08.2008 ರಂದು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. "ಬಿ" ಪ್ರತಿಯಲ್ಲಿ ನಮೂದಿಸಿದ ಆರ್.ಸಿ. ಮಾಲೀಕರ ವಿಳಾಸಕ್ಕೆ ಅಂದರೆ ಶ್ರೀ ಹನುಮಂತಪ್ಪ ಕಲಾಲ್ ಬಿನ್ ಲಕ್ಷ್ಮಣಪ್ಪ, ಶಿವಾಜಿರಸ್ತೆ, ಸಾಗರ ಇವರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1)ರ ಪ್ರಕಾರ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎನ್ನುವುದಕ್ಕೆ ಆರ್.ಸಿ. ಮಾಲೀಕರ ಹೇಳಿಕೆ ಮತ್ತು ಸಂಬಂಧಪಟ್ಟ ದಾಖಲೆಗಳನ್ನು ಸಲ್ಲಿಸುವಂತೆ 30 ದಿನಗಳ ಕಾಲಾವಕಾಶ ನೀಡಿ ದಿನಾಂಕ:30.08.2008ರಂದು ಕಾರಣ ಕೇಳಿ ಪತ್ರವನ್ನು ಜಾರಿ ಮಾಡಿರುತ್ತದೆ. ವಲಯ ಅರಣ್ಯಾಧಿಕಾರಿ, ಸಾಗರ ಇವರು ಕಾರಣ ಕೇಳಿ ಪತ್ರವನ್ನು ದಿನಾಂಕ;14.09.2008ರಂದು ಜಾರಿ ಮಾಡಿದ ಬಗ್ಗೆ ಅವರ ಪತ್ರ ಸಂಖ್ಯೆ: 913/08–09 ದಿನಾಂಕ:15.09.2008ರಲ್ಲಿ ವರದಿಸಿರುತ್ತಾರೆ. ಕಾರಣ ಕೇಳಿ ಪತ್ರವನ್ನು ಜಾರಿ ಮಾಡಿ 30 ದಿನಗಳಾದರೂ ಆರ್.ಸಿ. ಮಾಲೀಕರಾಗಲೀ, ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ವಾಹನ ಬಿಡಿಸಿಕೊಳ್ಳುವ ಬಗ್ಗೆ ಅರ್ಜಿ ಸಲ್ಲಿಸಿರುವುದಿಲ್ಲ.

ಮುಂದುವರೆದು, ಈ ವಾಹನದಲ್ಲಿ ಈ ಹಿಂದೆ ಸಹಾ ದಿನಾಂಕ:15.08.2000ರಂದು ಬೀಟೆ ನಾಟಾ 5=0.509ಎಂ3 ಸಾಗಾಣಿಕೆ ಮಾಡಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಸಾಗರ ಇವರು ಇಲಾಖಾ ಪರ ಜಪ್ತುಮಾಡಿ ಅ.ಮೊ. ಸಂಖ್ಯೆ:72/00–01ನ್ನು

ದಾಖಲಿಸಿರುತ್ತಾರೆ. ಈ ಖಾಲಿ ವಾಹನವನ್ನು ಮಧ್ಯಂತರ ಅವಧಿಗೆ ಬಿಡಲು ಮಾನ್ಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಶಿವಮೊಗ್ಗದ ಕ್ರಿ.ಮಿ.ಅ.ನಂ.34/01 ದಿನಾಂಕ:30.10.2001ರಲ್ಲಿ ಆದೇಶವಾಗಿರುತ್ತದೆ. ನ್ಯಾಯಾಲಯದ ಆದೇಶದಂತೆ ರೂ.25000/–ಕ್ಕೆ ಭದ್ರತಾ ಠೇವಣಿ ಮತ್ತು ರೂ.12000/–ಕ್ಕೆ ಬ್ಯಾಂಕ್ ಗ್ಯಾರಂಟಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಿ ಖಾಲಿ ವಾಹನವನ್ನು ಆರ್.ಸಿ. ಮಾಲೀಕರು ದಿನಾಂಕ;28.06.2004ರಂದು ಪಡೆದಿರುತ್ತಾರೆ.

ಖಾಲಿ ವಾಹನ ಪಡೆದ ನಂತರ ಪುನಃ ಅಕ್ರಮವಾಗಿ ನಾಟಾ ಸಾಗಾಣಿಕೆ ಮಾಡಲು ಈ ವಾಹನವನ್ನು ದಿನಾಂಕ:23.07.2008ರಂದು ಉಪಯೋಗಿಸಿರುತ್ತಾರೆ.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ;06.12.2008ರಂದು ವಾದ ಮಂಡಿಸಿ ಈ ವಾಹನದಲ್ಲಿ ಹೊನ್ನೆ ನಾಟಾವನ್ನು ಸಾಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ ಇವರು ಮಹಜರ್ ಪ್ರತಿ ಮತ್ತು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುವುದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ವಾಹನ ಮಾಲೀಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ಯಾರೂ ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನ ಸಾಗಾಣಿಕೆ ಮಾಡದಿರುವ ಬಗ್ಗೆ ಈ ನ್ಯಾಯಾಲಯಕ್ಕೆ ಯಾವುದೇ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸಿರುವುದಿಲ್ಲ. ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1) ಪ್ರಕಾರ ನೋಟೀಸ್ ಜಾರಿ ಮಾಡಲಾಗಿದೆ. ಹಾಗೂ ಈ ವಾಹನದ ಬಗ್ಗೆ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಿ 30 ದಿನಗಳಿಗಿಂತಲೂ ಹೆಚ್ಚು ಕಾಲವಾಗಿರುವುದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿ ಕರ್ನಾಟಕ ಅರಣ್ಯ ಕಾಯ್ದೆ 1963 ಉಪನಿಯಮ 71(ಬಿ)(1)ರ ಪ್ರಕಾರ ಆರ್.ಸಿ. ಮಾಲೀಕರಿಗೆ ನೋಟೀಸ್ ಜಾರಿ ಮಾಡಿ 30 ದಿನ ಕಾಲಾವಕಾಶ ಮುಗಿದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ಹಾಗೂ ಈವರೆಗಿನ ತಿದ್ದುಪಡಿ ಅನುಸಾರ ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ, ಆನವಟ್ಟಿ ಇವರು ಜಪ್ತು ಮಾಡಿದ ವಾಹನ 407 ಮಿನಿಲಾರಿ ಕೆಎ–15–1002ರಲ್ಲಿ ಕರ್ನಾಟಕ ಸರ್ಕಾರದ ಸಂಪತ್ತಾದ ಹೊನ್ನೆ ನಾಟಾ 15=1.845ಎಂ3ನ್ನು ಕ್ರಮವಾಗಿ ಸಾಗಿಸಲು ಉಪಯೋಗಿಸಿರುವುದರಿಂದ ವಾಹನ 407 ಮಿನಿಲಾರಿ ಕೆಎ–15–1002ನ್ನು ಮತ್ತು ಈ ವಾಹನದಲ್ಲಿದ್ದ ಹೊನ್ನೆ ನಾಟಾ 15=1.845ಎಂ3 ಅನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಲು ದಿನಾಂಕ:20.12.2008ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರೂ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

ಪಿ.ಆರ್.43

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ:13/08–09, ದಿನಾಂಕ:20ನೇ ಡಿಸೆಂಬರ್, 2008**

**ಉಪಸ್ಥಿತರು:** ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಫಿರ್ಯಾದಿದಾದರರು:** ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು:** ಪತ್ತೆಯಾಗಿಲ್ಲ.

**ಬಾಧ್ಯತೆದಾರರು:** ಯಾರೂ ಹಕ್ಕು ಬಾಧ್ಯತೆ ಅರ್ಜಿ ಸಲ್ಲಿಸಿಲ್ಲ.

**ಪ್ರಸ್ತಾವನೆ:**

ದಿನಾಂಕ:20.07.2008ರಂದು ಶಿಕಾರಿಪುರ ವಲಯದ ಹೊಸೂರು ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರು ಇಲಾಖಾ ವಾಹನ ಕೆಎ–15–ಜಿ–250ರಲ್ಲಿ ಶಿಕಾರಿಪುರ ತಾ: ಶಿಕಾರಿಪುರದಿಂದ ಮಾಸೂರಿಗೆ ಹೋಗುವ ಪಿಡಬ್ಲ್ಯೂಡಿ ರಸ್ತೆಯ

ದಿಂಡದಹಳ್ಳಿ ಕ್ರಾಸ್ ಬಳಿ ರಾತ್ರಿ ಸುಮಾರು 10.30ರ ಸಮಯದಲ್ಲಿ ಗಸ್ತು ಮಾಡುತ್ತಾ, ಶಿಕಾರಿಪುರ ಕಡೆಯಿಂದ ಬರುವ ಎಲ್ಲಾ ವಾಹನಗಳನ್ನು ತಪಾಸಣೆ ಮಾಡುತ್ತಿರುವಾಗ ಬೆಳಗಿನ ಜಾವ ಸುಮಾರು 3–15ರ ಸಮಯದಲ್ಲಿ ಶಿಕಾರಿಪುರದ ಕಡೆಯಿಂದ ಒಂದು ಬೈಕಿನಲ್ಲಿ 3 ಜನ ಆಸಾಮಿಗಳು ಒಂದು ತುಂಬಿದ ಗೋಣಿ ಚೀಲವನ್ನು ಇಟ್ಟುಕೊಂಡು ಬರುತ್ತಿರುವುದನ್ನು ಕೈ ಅಡ್ಡಹಾಕಿ ನಿಲ್ಲಿಸಲು ಸೂಚನೆ ಕೊಟ್ಟಾಗ ಬೈಕ್ ನಿಲ್ಲಿಸದೆ ವೇಗವಾಗಿ ಮುಂದೆ ಹೋದಾಗ ಇಲಾಖಾ ವಾಹನದಲ್ಲಿ ಬೆನ್ನಟ್ಟಿದಾಗ ಬೈಕ್, ತುಂಬಿದ ಚೀಲ ಬಿಟ್ಟು ಆಸಾಮಿಗಳು ಕೈಗೆ ಸಿಗದೆ ಪರಾರಿಯಾಗಿರುತ್ತಾರೆ. ನಂತರ ವಾಹನವನ್ನು ಪರಿಶೀಲಿಸಲಾಗಿ, ಕೆಎ–27–ಜೆ–9285, ಛಾಸ್ಸಿಸ್ ನಂ.FDCBKB-47093, ಇಂಜಿನ್ ನಂ. FDCBKB-47297, ಆಗಿದ್ದು, ಗೋಣಿಚೀಲದಲ್ಲಿ ಶ್ರೀಗಂಧವಿದ್ದು, ಕಛೇರಿಯಿಂದ ಸ್ಪ್ರಿಂಗ್ ಸ್ಕೇಲ್ ತರಿಸಿ 4 ತುಂಡು ಗಂಧವನ್ನು ತೂಕ ಮಾಡಿದಾಗ 12 ಕೆ.ಜಿ. ತೂಕವಿದ್ದು, ಈ ತುಂಡುಗಳ ಮೇಲೆ ಯಾವುದೇ ಇಲಾಖಾ ಛಾಪಾದ ಗುರುತಿರಲಿಲ್ಲ ಮತ್ತು ಇದನ್ನು ಸಾಗಿಸಲು ರಹದಾರಿ ಇರಲಿಲ್ಲವಾದ್ದರಿಂದ ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತಿ ವರದಿಯೊಂದಿಗೆ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಇಲಾಖಾ ಪರ ವಶಪಡಿಸಿಕೊಂಡು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 84, 86, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಶಿಕಾರಿಪುರ ವಲಯದ ಅ.ಮೊ.ಸಂ.22/08–09, ದಿನಾಂಕ:21.07.2008ನ್ನು ದಾಖಲಿಸಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ದಿಗೆ ಕೊಡಲು ಆದೇಶವಾಗಿದೆ.

ಈ ಪ್ರಕರಣದಲ್ಲಿ ವಾಹನದ ಆರ್.ಸಿ. ಮಾಲೀಕರು ಯಾರು ಎನ್ನುವ ಬಗ್ಗೆ ಈ ವಾಹನ "ಬಿ" ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಹಾವೇರಿ ಇವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ–13/08–09, ದಿನಾಂಕ:06.08.2008ರಂದು ಕೋರಲಾಗಿತ್ತು. ಅದರಂತೆ ಈ ವಾಹನದ "ಬಿ" ಪ್ರತಿಯನ್ನು ಸಾರಿಗೆ ಅಧಿಕಾರಿ, ಹಾವೇರಿ ಇವರ ಕಛೇರಿ ಪತ್ರ ಸಂಖ್ಯೆ: ಪ್ರಾಸಾಅ/ಹಾ/ನೊಂದಣಿ/08–09 ದಿನಾಂಕ:12.08.2008ರ ಪತ್ರದಲ್ಲಿ ದಿನಾಂಕ:18.08.2008ರಂದು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. "ಬಿ" ಪ್ರತಿಯಲ್ಲಿ ನಮೂದಿಸಿದ ಆರ್.ಸಿ. ಮಾಲೀಕರ ಹೆಸರು, ವಿಳಾಸವು ಶ್ರೀ ರವಿಚಂದ್ರ ವಿಭೂತಿ ಬಿನ್ ಸೋಮಪ್ಪ, ಮನೆ ನಂ.9, 1ನೇ ತಿರುವು, ಮಾರುತಿ ನಗರ, ರಾಣಿಬೆನ್ನೂರು ಇವರಿಗೆ ಈ ನ್ಯಾಯಾಲಯದಿಂದ ದಿನಾಂಕ:21.08.2008ರಂದು ಕಾರಣಕೇಳಿ ಪತ್ರವನ್ನು ನೊಂದಣಿ ಅಂಚೆ ಮೂಲಕ ಜಾರಿ ಮಾಡಿರುತ್ತದೆ. ಕಾರಣ ಕೇಳಿ ಪತ್ರ ಜಾರಿ ಮಾಡಿದ ಬಗ್ಗೆ ಸ್ವೀಕೃತಿ ಪತ್ರವನ್ನು ಅಂಚೆ ಇಲಾಖೆಯವರು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಕಾರಣ ಕೇಳಿ ಪತ್ರವನ್ನು ಜಾರಿ ಮಾಡಿ 30 ದಿನಗಳಿಗಿಂತಲೂ ಹೆಚ್ಚು ಕಾಲವಾದರೂ ವಾಹನ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ವಾಹನ ಬಿಡಿಸಿಕೊಳ್ಳುವ ಬಗ್ಗೆ ಅರ್ಜಿ ಸಲ್ಲಿಸಿರುವುದಿಲ್ಲ.

ಈ ಪ್ರಕರಣದಲ್ಲಿ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಇವರು ದಿನಾಂಕ;26.08.2008ರಂದು ವಿಚಾರಣಾ ವರದಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿ ಈ ಪ್ರಕರಣದಲ್ಲಿ, ಆರೋಪಿಗಳು ಪತ್ತೆಯಾಗದ ಕಾರಣ ಸದರಿ ಪ್ರಕರಣವನ್ನು 71(ಎ) ರೀತ್ಯಾ ಕ್ರಮ ಕೈಗೊಳ್ಳಲು ಕೋರಿರುತ್ತಾರೆ.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ:06.12.2008ರಂದು ವಾದ ಮಂಡಿಸಿ ಈ ವಾಹನದಲ್ಲಿ ಶ್ರೀಗಂಧವನ್ನು ಸಾಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ, ಶಿಕಾರಿಪುರ ಇವರು ಮಹಜರ್ ಪ್ರತಿ ಮತ್ತು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುವುದರಿಂದ ಈ ವಾಹನದಲ್ಲಿ ಶ್ರೀಗಂಧವನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1) ಪ್ರಕಾರ ನೋಟೀಸ್ ಜಾರಿ ಮಾಡಿ 30 ದಿನಗಳಿಗಿಂತಲೂ ಹೆಚ್ಚು ಕಾಲವಾಗಿದ್ದು ಯಾರೂ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿ ಕರ್ನಾಟಕ ಅರಣ್ಯ ಕಾಯ್ದೆ 1963 ಉಪನಿಯಮ 71(ಬಿ)(1)ರ ಪ್ರಕಾರ ಆರ್.ಸಿ. ಮಾಲೀಕರಿಗೆ ನೋಟೀಸ್ ಜಾರಿ ಮಾಡಿ 30 ದಿನಗಳ ಕಾಲಾವಕಾಶ ಮುಗಿದರೂ ಯಾರೂ ಹಕ್ಕು ಭಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ಹಾಗೂ ಈವರೆಗಿನ ತಿದ್ದುಪಡಿ ಅನುಸಾರ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ, ಶಿಕಾರಿಪುರ ಇವರು ಜಪ್ತು ಮಾಡಿದ ವಾಹನ ಬಜಾಜ್ ಬೈಕ್ ನಂ. ಕೆಎ–27–ಜೆ–9285 (ಛಾಸ್ಸಿಸ್ ನಂ.FDCBKB-47093, ಇಂಜಿನ್ ನಂ. FDCBKB-47297) ರಲ್ಲಿ ಕರ್ನಾಟಕ ಸರ್ಕಾರದ ಸಂಪತ್ತಾದ 12

ಕೆ.ಜಿ. ಶ್ರೀಗಂಧವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುವುದರಿಂದ ವಾಹನ ಬಜಾಜ್ ಬೈಕ್ ನಂ. ಕೆಎ–27–ಜೆ–9285 (ಛಾಸ್ಸಿಸ್ ನಂ.FDCBKB-47093, ಇಂಜಿನ್ ನಂ. FDCBKB-47297) ಮತ್ತು ಈ ವಾಹನದಲ್ಲಿದ್ದ 12 ಕೆ.ಜಿ. ಶ್ರೀಗಂಧವನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ:20.12.2008ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರೂ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

ಪಿ.ಆರ್.44

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ:16/07–08, ದಿನಾಂಕ:20ನೇ ಡಿಸೆಂಬರ್, 2008**

**ಉಪಸ್ಥಿತರು:** ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಫಿರ್ಯಾದಿದಾರರು:** ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು:** ಪತ್ತೆಯಾಗಿಲ್ಲ.

**ಬಾಧ್ಯತೆದಾರರು:** ಯಾರೂ ಹಕ್ಕು ಬಾದ್ಯತೆ ಅರ್ಜಿ ಸಲ್ಲಿಸಿಲ್ಲ.

**ಪ್ರಸ್ತಾವನೆ:**

ದಿನಾಂಕ:19.09.2007ರಂದು ಅಂಬ್ಲಿಗೊಳ ವಲಯದ ಸಾಲೂರು ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದಂತೆ ಶಿಕಾರಿಪುರ ತಾ: ಸಾಲೂರು ಗ್ರಾಮದ ಚುಂಚಿನಕೊಪ್ಪ ಕ್ರಾಸ್‌ನಲ್ಲಿರುವ ಅರಣ್ಯ ವಸತಿ ಗೃಹದ ಬಳಿ ರಾತ್ರಿ ಕಾಯುತ್ತಿರುವಾಗ ಸುಮಾರು 8.15ರ ಸಮಯದಲ್ಲಿ ಒಂದು ಎಂ–80 ವಾಹನವು ಚುಂಚನಕೊಪ್ಪ ಕಡೆಯಿಂದ ಶಿಕಾರಿಪುರದ ಕಡೆಗೆ ಹೋಗುತ್ತಿರುವುದನ್ನು ಹತ್ತಿರದಿಂದ ನೋಡಿದಾಗ ಯಾರೊ ಇಬ್ಬರು ಆಸಾಮಿಗಳು ಮಧ್ಯದಲ್ಲಿ ನಾಟಾದ ತುಂಡನ್ನು ಇಟ್ಟುಕೊಂಡು ಹೋಗುತ್ತಿರುವುದನ್ನು ಬ್ಯಾಟರಿ ಬೆಳಕಿನಿಂದ ನೋಡಲಾಗಿ, ಸದರಿ ವಾಹನವನ್ನು ಸಿಬ್ಬಂದಿಗಳ ವಾಹನದಿಂದ ಬೆನ್ನಟ್ಟಿದಾಗ ಸುಮಾರು 200–300 ಮೀಟರ್ ದೂರದಲ್ಲಿ ಎಂ–80 ವಾಹನ ಮತ್ತು ಅದರಲ್ಲಿದ್ದ ಮರದ ತುಂಡುಗಳನ್ನು ರಸ್ತೆ ಮಧ್ಯದಲ್ಲಿ ಬಿಟ್ಟು ಪಕ್ಕದಲ್ಲಿರುವ ಕೆಸರು ಗದ್ದೆಯಲ್ಲಿ ಓಡಿದರು. ಅವರನ್ನು ಇಲಾಖೆಯವರು ಬೆನ್ನಟ್ಟಿದರೂ ಕೈಗೆ ಸಿಗದೆ ಪರಾರಿಯಾಗಿರುತ್ತಾರೆ. ನಂತರ ವಾಹನ ಪರಿಶೀಲಿಸಿದಾಗ ಕೆಂಪು ಬಣ್ಣದ ವಾಹನದ ನಂ.ಕೆಎ–15–ಇ–4681, ಛಾಸ್ಸೀಸ್ ನಂ.16ಸಿ95ಎಫ್65914 ಹಾಗೂ ಇಂಜಿನ್ ನಂ.16ಇ95–ಎಫ್–65760 ಆಗಿದ್ದು, ಮರದ ತುಂಡುಗಳು ಬೀಟೆ ಜಾತಿಯದಾಗಿದ್ದು, ಈ ಬೀಟೆ ತುಂಡುಗಳ ಮೇಲೆ ಇಲಾಖಾ ಛಾಪಾದ ಗುರುತು ಕಂಡು ಬಂದಿರುವುದಿಲ್ಲ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಪ್ರವವ, ಮಹಜರ್ ವರದಿ ಜಪ್ತು ವರದಿಯೊಂದಿಗೆ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಇಲಾಖಾ ಪರ ಜಪ್ತು ಮಾಡಿ ನಾಟಾಗಳಿಗೆ ಹಳದಿ ಬಣ್ಣದಿಂದ ಕ್ರ.ಸ. ನೀಡಿ, ಅಳತೆ ಮಾಡಿ, 01=0.061ಎಂ3 ಇದಕ್ಕೆ ಕ.ಅ.ಕಾಯಿದೆ 1963 ಸೆಕ್ಷನ್ 24, 62, 71(ಎ), 104(ಎ) ಮತ್ತು ಕ.ಅ. ಕಾನೂನು 1969 ಉಪನಿಯಮ 144, 165ರ ಪ್ರಕಾರ ಅಂಬ್ಲಿಗೊಳ ವಲಯದ ಅ.ಮೊ.ಸಂ.55/07–08ನ್ನು ದಾಖಲಿಸಿ, ವಾಹನ ಮತ್ತು ಅ.ಉ.ವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ದಿಗೆ ಕೊಡಲು ಆದೇಶವಾಗಿದೆ.

ಈ ಪ್ರಕರಣದಲ್ಲಿ ವಾಹನದ ಆರ್.ಸಿ. ಮಾಲೀಕರ ವಿಳಾಸ ತಿಳಿಯುವ ಬಗ್ಗೆ ಈ ವಾಹನ "ಬಿ" ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಸಾಗರ ಇವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ–16/07–08, ದಿನಾಂಕ:10.12.2007ರಂದು ಕೋರಲಾಗಿತ್ತು. ಅದರಂತೆ ಈ ವಾಹನದ "ಬಿ" ಪ್ರತಿಯನ್ನು ಸಾರಿಗೆ ಅಧಿಕಾರಿ, ಸಾಗರ ಇವರ ಕಛೇರಿ ಪತ್ರ ಸಂಖ್ಯೆ: ಸಪ್ರಾಸಾಅ/ ಸಾಗರ/ ಕೆಎ–15–1468/08–09 ದಿನಾಂಕ:11.07.2008ರ ಪತ್ರದಲ್ಲಿ ದಿನಾಂಕ:16.07.2008ರಂದು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. "ಬಿ" ಪ್ರತಿಯಲ್ಲಿ ನಮೂದಿಸಿದ ಆರ್.ಸಿ. ಮಾಲೀಕರ ಹೆಸರು ಶ್ರೀ ಚಂದ್ರಪ್ಪ ಹೆಚ್. ಬಿನ್ ಹನುಮಂತಪ್ಪ ಎಲ್.ಐ.ಸಿ. ಏಜೆಂಟ್, ಸಾಲೂರು, ಶಿಕಾರಿಪುರ ತಾಲ್ಲೂಕು ಇವರಿಗೆ ಈ ನ್ಯಾಯಾಲಯದಿಂದ ದಿನಾಂಕ:25.07.2008ರಂದು ಕಾರಣ ಕೇಳಿ ಪತ್ರವನ್ನು 30 ದಿನಗಳ ಕಾಲಾವಕಾಶ ನೀಡಿ ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ಇವರ ಮುಖಾಂತರ ಜಾರಿ ಮಾಡಿರುತ್ತದೆ. ಸದರಿ ನೋಟೀಸನ್ನು ದಿನಾಂಕ:07.08.2008 ರಂದು ಆರ್.ಸಿ. ಮಾಲೀಕರಿಗೆ ಜಾರಿ ಮಾಡಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ಇವರ

ಕಛೇರಿಯ ಪತ್ರ ಸಂಖ್ಯೆ:ವಅಅ:ಅಮೊ: ದಿಂದ:ನೊ:ವಿವರ–161/08–09 ದಿನಾಂಕ:12.08.2008ರ ಪತ್ರದಲ್ಲಿ ಈ ನ್ಯಾಯಾಲಯಕ್ಕೆ ವರದಿಸಿರುತ್ತಾರೆ.

ಈ ನೋಟೀಸ್‌ಗೆ ಆರ್.ಸಿ. ಮಾಲೀಕರು ದಿನಾಂಕ:26.08.2008ರಂದು ಈ ನ್ಯಾಯಾಲಯಕ್ಕೆ ಪತ್ರ ಬರೆದು ಈ ಕೆಳಗಿನಂತೆ ಕೋರಿರುತ್ತಾರೆ. "ಬಜಾಜ್ ಎಂ–80 ಬೈಕ್‌ನ್ನು 1995ರಲ್ಲಿ ಎಲ್.ಐ.ಸಿ. ಕಛೇರಿಯಲ್ಲಿ ಲೋನ್ ಮೂಲಕ ತೆಗೆದುಕೊಂಡಿದ್ದೆಂದು, 2000ಕ್ಕೆ ಇದರ ಲೋನ್ ಮುಗಿದಿದೆಯೆಂದು, ಈ ಬೈಕನ್ನು ಹೋತನಕಟ್ಟೆ ವಾಸಿಯಾದ ಚಂದ್ರಪ್ಪ ಬಿನ್ ನಿಂಗಪ್ಪ ಇವರಿಗೆ ಮಾರಾಟ ಮಾಡಿರುತ್ತೇನೆಂದು, ಈ ಸಮಯದಲ್ಲಿ ಫಾರಂ–28ಕ್ಕೆ ಸಹಿ ಮಾಡಿದ್ದೇನೆಂದು, ಮತ್ತು ಅವರ ಹೆಸರಿಗೆ ವರ್ಗಾವಣೆಗೆ ಶಿಕಾರಿಪುರ ವಿನಯ ಡ್ರೈವಿಂಗ್ ಸ್ಕೂಲ್‌ನ ವಿಷ್ಣು ಅವರಿಗೆ ಕೊಟ್ಟಿದ್ದೇನೆಂದು, ಈಗ ನೋಡಿದರೆ ಪಾರ್ಟಿ ತನ್ನ ಹೆಸರಿಗೆ ಮಾಡಿಸಿಕೊಂಡಿರುವುದಿಲ್ಲವೆಂದು, ನನ್ನ ಹತ್ತಿರ ತೆಗೆದುಕೊಂಡ ಪಾರ್ಟಿ ಪುನಃ ಬೇರೆಯವರಿಗೆ ಮಾರಾಟ ಮಾಡಿರುತ್ತಾನೆಂದು, ಇದರ ಬಗ್ಗೆ ತಾವು ಲಿಖಿತ ಸಮಜಾಯಿಷಿ ಕೇಳಿದ ಕಾರಣ ಈ ವಾಹನವನ್ನು ಬೇರೆಯವರಿಗೆ ಮಾರಾಟ ಮಾಡಿರುತ್ತೇನೆ. ಆದ್ದರಿಂದ ಈ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳುವುದರಲ್ಲಿ ನನ್ನದು ಯಾವುದೇ ತಕರಾರು ಇರುವುದಿಲ್ಲ ಎಂದು ತಿಳಿಸುತ್ತೇನೆ" ಎಂದು ಲಿಖಿತ ಹೇಳಿಕೆಯನ್ನು ಈ ನ್ಯಾಯಾಲಯಕ್ಕೆ ನೀಡಿರುತ್ತಾರೆ.

ಈ ಪ್ರಕರಣದಲ್ಲಿ ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ಇವರು ಈ ನ್ಯಾಯಾಲಯಕ್ಕೆ ವಿಚಾರಣಾ ವರದಿ ಸಲ್ಲಿಸಿ ಎಂ–80 ವಾಹನದ ಮಾಲೀಕರಾಗಲೀ ಯಾವ ವ್ಯಕ್ತಿಗಳಾಗಲೀ ಬಂದಿರುವುದಿಲ್ಲ. ಸದರಿ ಪ್ರಕರಣವು 71(ಎ) ಅಡಿಯಲ್ಲಿ ದಾಖಲಾಗಿರುವುದರಿಂದ ಈ ಮೊಕದ್ದಮೆ ಬಗ್ಗೆ ಇಲಾಖೆ ಮುಖಾಂತರ ಇತ್ಯರ್ಥಪಡಿಸಿ ವಿಲೇಮಾಡಲು ಕೋರಿರುತ್ತಾರೆ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಪ್ರಕಟಣೆಯನ್ನು ದಿನಾಂಕ:05.01.2008ರಂದು 30 ದಿನಗಳ ಕಾಲಾವಕಾಶ ನೀಡಿ ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಿದಂತೆ ದಿನಾಂಕ:28.02.2008 ರಂದು ಸಾಗರ ಸಂದೇಶ ದಿನಪತ್ರಿಕೆಯಲ್ಲಿ, ದಿನಾಂಕ:17.01.2008ರಂದು ಗೆಜೆಟ್‌ನಲ್ಲಿ ಪ್ರಕಟಣೆಯು ಪ್ರಕಟಗೊಂಡಿರುತ್ತದೆ.

ಸಹಾಯಕ ಸರ್ಕಾರಿ ಅಭಿಯೋಜಕರು, ದಿನಾಂಕ:06.12.2008ರಂದು ವಾದ ಮಂಡಿಸಿ ಈ ವಾಹನದಲ್ಲಿ ಬೀಟೆ ತುಂಡನ್ನು ಸಾಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ, ಅಂಬ್ಲಿಗೊಳ ಇವರು ಮಹಜರ್ ಪ್ರತಿ ಮತ್ತು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುವುದರಿಂದ ಈ ವಾಹನದಲ್ಲಿ ಬೀಟೆ ತುಂಡನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ವಾಹನ ಮಾಲೀಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ಯಾರೂ ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನ ಸಾಗಾಣಿಕೆ ಮಾಡದಿರುವ ಬಗ್ಗೆ ಈ ನ್ಯಾಯಾಲಯಕ್ಕೆ ಯಾವುದೇ ಸಾಕ್ಷಾಧಾರಗಳನ್ನು ಹಾಜರುಪಡಿಸಿರುವುದಿಲ್ಲ. ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1) ಪ್ರಕಾರ ನೋಟೀಸ್ ಜಾರಿ ಮಾಡಲಾಗಿದೆ. ಹಾಗೂ ಈ ವಾಹನದ ಬಗ್ಗೆ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಿ 30 ದಿನಗಳಿಗಿಂತಲೂ ಹೆಚ್ಚು ಕಾಲವಾಗಿರುವುದರಿಂದ ವಾಹನ ಮತ್ತು ಬೀಟೆ ಸೈಜನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿ ಕರ್ನಾಟಕ ಅರಣ್ಯ ಕಾಯ್ದೆ 1963 ಉಪನಿಯಮ 71(ಬಿ)(1)ರ ಪ್ರಕಾರ ಆರ್.ಸಿ. ಮಾಲೀಕರಿಗೆ ನೋಟೀಸ್ ಜಾರಿ ಮಾಡಿ 30 ದಿನ ಕಾಲಾವಕಾಶ ಮುಗಿದರೂ ಹಾಗೂ ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ಹಾಗೂ ಈವರೆಗಿನ ತಿದ್ದುಪಡಿ ಅನುಸಾರ ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ, ಅಂಬ್ಲಿಗೊಳ ಇವರು ಜಪ್ತು ಮಾಡಿದ ವಾಹನ ಬಜಾಜ್ ಎಂ–80, ಕೆಎ–15–ಇ–4681, (ಛಾಸ್ಸೀಸ್ ನಂ.16ಸಿ95ಎಫ್65914 ಹಾಗೂ ಇಂಜಿನ್ ನಂ.16ಇ95–ಎಫ್–65760) ರಲ್ಲಿ ಬೀಟೆ ತುಂಡು 01=0.061ಎಂ3 ಕರ್ನಾಟಕ ಸರ್ಕಾರದ ಸಂಪತ್ತನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುವುದರಿಂದ ವಾಹನ ಬಜಾಜ್ ಎಂ–80, ಕೆಎ–15–ಇ–4681, (ಛಾಸ್ಸೀಸ್ ನಂ.16ಸಿ95ಎಫ್65914 ಹಾಗೂ ಇಂಜಿನ್ ನಂ.16ಇ95–ಎಫ್–65760) ಮತ್ತು ಈ ವಾಹನದಲ್ಲಿದ್ದ ಬೀಟೆ ತುಂಡು 01=0.061ಎಂ3ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ:20.12.2008ರಂದು

ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರೂ ಈ ನ್ಯಾಯಾಲಯಕ್ಕೆ ಹಕ್ಕುಭಾದ್ಯತೆಯ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಪಿ.ಆರ್.45 ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ:20/07–08, ದಿನಾಂಕ:20ನೇ ಡಿಸೆಂಬರ್, 2008**

**ಉಪಸ್ಥಿತರು:** ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಫಿರ್ಯಾದಿದಾರರು:** ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು:** ನಾಗರಾಜ್ ಬಿನ್ ಈರಯ್ಯ, ಅಂದಾಜು 30 ವರ್ಷ, ಎಸ್.ಎನ್. ನಗರ, ಸಾಗರ.

**ಬಾಧ್ಯತೆದಾರರು:** ಯಾರೂ ಹಕ್ಕು ಬಾಧ್ಯತೆ ಅರ್ಜಿ ಸಲ್ಲಿಸಿಲ್ಲ.

**ಪ್ರಸ್ತಾವನೆ:**

ದಿನಾಂಕ:11.12.2007ರಂದು ಆನಂದಪುರಂ ವಲಯ, ಚೋರಡಿಯ ಗೌತಮ್‌ಪುರ ಶಾಖೆ ವನಪಾಲಕ ಮತ್ತು ಸಿಬ್ಬಂದಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಸಾಗರ ತಾ: ಆನಂದಪುರಂ ಹೋಬಳಿ ಚಿಕ್ಕಬಿಲಗುಂಜಿ ಗ್ರಾಮದ ತಳಗಿನಮನೆ ಮೀಸಲು ಅರಣ್ಯದ ಬ್ಯಾಡರಕೊಪ್ಪದಿಂದ ಅಡ್ಡೇರಿಗೆ ಹೋಗುವ ರಸ್ತೆಯಲ್ಲಿ ಇಲಾಖಾ ವಾಹನ ಕೆಎ–15–ಜಿ–86ರಲ್ಲಿ ಹೋಗುತ್ತಿರುವಾಗ ಮೇಲ್ಕಾಣಿಸಿದ ಸ್ಥಳದಲ್ಲಿ ಸುಮಾರು 6 ರಿಂದ 8 ಜನ ಆಸಾಮಿಗಳು ನಾಟಾಗಳನ್ನು ವಾಹನಕ್ಕೆ ತುಂಬುತ್ತಿರುವುದು ಕಂಡು ಇಲಾಖೆಯವರು ಜೀಪಿನಿಂದ ಕೆಳಗಿಳಿಯುತ್ತಿರುವುದನ್ನು ನೋಡಿದ ಆಸಾಮಿಗಳು ಓಡಲು ಪ್ರಾರಂಭಿಸಿದರು. ಅವರನ್ನು ಬೆನ್ನಟ್ಟಿದರೂ ಕೈಗೆ ಸಿಗದೆ ಪರಾರಿಯಾಗಿರುತ್ತಾರೆ. ಮುಂದುವರೆದು, ವಾಹನ ಪರಿಶೀಲಿಸಿದಾಗ ವಾಹನದಲ್ಲಿ ಒಟ್ಟು 10 ಬೀಟೆ ನಾಟಾವಿದ್ದು, ಅವುಗಳ ಮೇಲೆ ಇಲಾಖೆಯ ಯಾವುದೇ ಛಾಪಾ ಗುರುತು ಕಂಡುಬಂದಿಲ್ಲವಾದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಟೆಂಪೋ ಎಕ್ಸ್‌ಎಲ್ ಕೆಎ–15–1987, ಛಾಸ್ಸೀಸ್ ನಂ. ಓ–590001771399, ಇಂಜಿನ್ ನಂಬರ್ ಡಿ–09000145ನ್ನು ಮತ್ತು ವಾಹನದಲ್ಲಿದ್ದ ಬೀಟೆ 10=1.737ಎಂ3 ನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತಿ ವರದಿಯೊಂದಿಗೆ ಇಲಾಖಾ ಪರ ಜಪ್ತಿಪಡಿಸಿಕೊಂಡು ಅರಣ್ಯ ಉತ್ಪನ್ನಗಳಿಗೆ ಛಾಪಾದ ಗುರುತು ಹಾಕಿ ಕ್ರಮಸಂಖ್ಯೆ ಕೊಟ್ಟು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 62, 71(ಎ), 80, 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಅ.ಮೊ.ಸಂ.84/07–08ನ್ನು ದಾಖಲಿಸಿ, ನಂತರ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ದಿಗೆ ಕೊಡಲು ದಿನಾಂಕ:01.01.2008ರಂದು ಆದೇಶವಾಗಿದೆ.

ಈ ವಾಹನದ ಆರ್.ಸಿ. ಮಾಲೀಕರ ಬಗ್ಗೆ ತಿಳಿಯಲು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಸಾಗರ ಇವರಿಗೆ ಈ ನ್ಯಾಯಾಲಯದಿಂದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ–20/07–08, ದಿನಾಂಕ:01.01.2008ರಂದು ಬರೆದು ಈ ವಾಹನದ ಬಿ ಪ್ರತಿಯನ್ನು ಒದಗಿಸಲು ಕೋರಲಾಗಿತ್ತು. ಅವರಿಂದ ಯಾವುದೇ ಮಾಹಿತಿ ಬಾರದ ಕಾರಣ ಪುನಃ ದಿನಾಂಕ:12.06.2008 ರಂದು ಪುನಃ ತಿಳುವಳಿಕೆ ಪತ್ರವನ್ನು ಸಾಗರ ಪ್ರಾದೇಶಿಕ ಸಾರಿಗೆ ಅಧಿಕಾರಿಗೆ ಪತ್ರ ಬರೆದಾಗ ಸಾಗರದ ಪ್ರಾದೇಶಿಕ ಸಾರಿಗೆ ಅಧಿಕಾರಿ ಇವರ ಕಛೇರಿ ಪತ್ರಸಂಖ್ಯೆ: ಸಪ್ರಾಸಾಅ:ಸಾಗರ: ಕೆಎ–15–1987/08–09 ದಿನಾಂಕ:21.06.2008ರಲ್ಲಿ ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. ಈ ಬಿ ಪ್ರತಿಯಲ್ಲಿ ನಮೂದಿಸಿದ ಆರ್.ಸಿ. ಮಾಲೀಕರಾದ ಶ್ರೀಮತಿ ಮಂಜುಳ ಕೋಂ ನಾಗರಾಜ್, 3ನೇ ತಿರುವು, ಎಸ್.ಎನ್. ನಗರ ಸಾಗರ ಇವರಿಗೆ ಬಿ3:ಅಮೊ:ವಾಹನ–20/07–08 ದಿನಾಂಕ:14.07.2008ರಂದು ಕಾರಣ ಕೇಳಿ ಪತ್ರವನ್ನು ವಲಯ ಅರಣ್ಯಾಧಿಕಾರಿ, ಸಾಗರ ಇವರ ಮುಖಾಂತರ ಜಾರಿ ಮಾಡಿ ದಿನಾಂಕ;19.07.2008ರಂದು ಆರ್.ಸಿ. ಮಾಲೀಕರು ಪಡೆದ ಬಗ್ಗೆ ವಲಯ ಅರಣ್ಯಾಧಿಕಾರಿ, ಸಾಗರ ಇವರ ಪತ್ರಸಂಖ್ಯೆ: ಕಾ.ಪತ್ರ:843/08–09 ದಿನಾಂಕ:13.08.2008ರ ಪತ್ರದಲ್ಲಿ ಈ ನ್ಯಾಯಾಲಯಕ್ಕೆ ವರದಿಸಿರುತ್ತಾರೆ. ಕಾರಣ ಕೇಳಿ ಪತ್ರ ಜಾರಿಮಾಡಿ 30 ದಿನಗಳಿಗೂ ಹೆಚ್ಚಿಗೆ ಕಾಲವಾದರೂ ಈ ವಾಹನ ಬಿಡಿಸಿಕೊಳ್ಳುವ ಬಗ್ಗೆ ಆರ್.ಸಿ. ಮಾಲೀಕರಾಗಲೀ, ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ.

ಈ ನಡುವೆ ಅಂದರೆ ದಿನಾಂಕ:05.01.2008ರಂದು ಈ ವಾಹನದ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಪತ್ರಿಕಾ ಪ್ರಕಟಣೆಯನ್ನು ಬಿ3:ಅಮೊ:ವಾಹನ–20/07–08 ರಲ್ಲಿ 30 ದಿನಗಳ ಕಾಲಾವಕಾಶ ನೀಡಿ ಹೊರಡಿಸಿ ಪ್ರತಿಯನ್ನು

ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಿದಂತೆ ದಿನಾಂಕ:28.02.2008 ರಂದು ಸಾಗರ ಸಂದೇಶ ದಿನಪತ್ರಿಕೆಯಲ್ಲಿ, ದಿನಾಂಕ:17.01.2008ರಂದು ಗೆಜೆಟ್‌ನಲ್ಲಿ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ಅಲ್ಲದೇ ಈ ಪ್ರಕಟಣೆ ಪ್ರಕಟವಾಗಿ 30 ದಿನಗಳಾದರೂ ಯಾರೂ ಈ ವಾಹನವನ್ನು ಬಿಡಿಸಿಕೊಳ್ಳಲು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು, ದಿನಾಂಕ:06.12.2008ರಂದು ವಾದ ಮಂಡಿಸಿ ಈ ಪ್ರಕರಣದಲ್ಲಿ ಆರ್.ಸಿ. ಮಾಲೀಕರಿಗೆ ಕಾರಣಕೇಳಿ ಪತ್ರ ಜಾರಿ ಮಾಡಿ 30 ದಿನಗಳಾದರೂ ಯಾರೂ ಈ ನ್ಯಾಯಾಲಯಕ್ಕೆ ವಾಹನ ಬಿಡಿಸಿಕೊಳ್ಳಲು ಅರ್ಜಿ ಸಲ್ಲಿಸಿರುವುದಿಲ್ಲ. ಇದರಿಂದ ಈ ವಾಹನವನ್ನು ಬಿಡಿಸಿಕೊಳ್ಳಲು ವಾಹನ ಮಾಲೀಕರಿಗೆ ಆಸಕ್ತಿ ಇಲ್ಲವೆಂದು ಮತ್ತು ಇವರು ಮಾಡಿರುವ ತಪ್ಪನ್ನು ಒಪ್ಪಿಕೊಂಡಂತಾಗಿದೆ. ಆದ್ದರಿಂದ ಈ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ನ್ಯಾಯಾಲಯವನ್ನು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿ ಕರ್ನಾಟಕ ಅರಣ್ಯ ಕಾಯ್ದೆ 1963 ಉಪನಿಯಮ 71(ಬಿ)(1)ರ ಪ್ರಕಾರ ಆರ್.ಸಿ. ಮಾಲೀಕರಿಗೆ ನೋಟೀಸ್ ಜಾರಿ ಮಾಡಿ 30 ದಿನ ಕಾಲಾವಕಾಶ ಮುಗಿದರೂ ಹಾಗೂ ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿದ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ಹಾಗೂ ಈವರೆಗಿನ ತಿದ್ದುಪಡಿ ಅನುಸಾರ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರು ಜಪ್ತು ಮಾಡಿದ ವಾಹನ ಟೆಂಪೋ ಎಕ್ಸ್‌ಎಲ್ ಕೆಎ–15–1987, (ಛಾಸ್ಸೀಸ್ ನಂ.ಟಿ–590001771399, ಇಂಜಿನ್ ನಂ.ಡಿ–09000145)ರಲ್ಲಿ ಕರ್ನಾಟಕ ಸರ್ಕಾರದ ಸಂಪತ್ತಾದ ಬೀಟೆ 10=1.737ಎಂ3ನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುವುದರಿಂದ ವಾಹನ ಟೆಂಪೋ ಎಕ್ಸ್‌ಎಲ್ ಕೆಎ–15–1987 (ಛಾಸ್ಸೀಸ್ ನಂ.ಟಿ–590001771399, ಇಂಜಿನ್ ನಂ.ಡಿ–09000145) ಮತ್ತು ಈ ವಾಹನದಲ್ಲಿದ್ದ ಬೀಟೆ 10=1.737ಎಂ3ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ:20.12.2008ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರೂ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

ಪಿ.ಆರ್.46

**OFFICE OF THE COMMISSIONER FOR PUBLIC INSTRUCTION, DHARWAD**

**CORRIGENDUM NOTIFICATION**

The following scheme for the Administration of the "Late Smt. Nilgangangamma, W/o Basana Gowda Police Patil Memorial Prize funds, which the Additional Commissioner for Public Instruction, Dharwad in Karnataka proposes to settle in exercise of the powers conferred by sub-section (1) of section 5 of the charitable Endowment Act 1890 (Central Act VI of 1890) is hereby published as required by rules 3 and 4 of the Charitable Endowments (Karnataka) Rules 1964.

SCHEME FOR THE ADMINISTRATION OF THE ENDOWMENT OF Rs.5,000/- DONATED BY Sri Rajendra Gowda, S/o Basana Gowda Police Patil at & P.O. Kadadi Gadag Taluk, Gadag.

1) The Endowment of Rs.5000/- donated by Sri Rajendra Gowda, S/o Basana Gowda Police Patil at & P.O. Kadadi Gadag Taluk, Gadag. Shall be known as the Late Smt. Nilgangangamma, W/o Basana Gowda Police Patil Memorial Pirze" Endowment Fund.

2) Where as in Previous Gazette Notification in this regard Dated: 26th April 2001, The Name entered "The Principal, Government Junior College, Kadadi, Gadag Taluk for the time being Shall be the

Administrator of the fund or with the committee consisting of the following Members" has been Changed because the Government Junior College has been shifted to another place & post of Principal has also shifted. Now, The Head Master post has been sanctioned to the said Government High School, Kadadi Gadag Taluk. Therefore, Head Master, Government High School, Kadadi, Gadag Taluk has newly changed Administrator of the above Fund Committee. And following are the Members of the Fund Committee.

(1) The Chairman, VPC, Kadadi, Gadag Taluk.

(2) The Head Master, Government High School, Kadadi, Gadag Taluk.

(3) Donor/ Related to the Donor.

3) The amount of the fund shall be invested in Government Security.

4) From and out of the Income accruing from the Fund Prize shall Be awarded annually to the student who secures highest Marks in S.S.L.C. (Board Examination) at the Government High School, Kadadi, Gadag Taluk, Instead of P.U.C.II (Board Examination) Government (Comp.) Junior College Kadadi, Gadag Taluk, because of Junior College has been shifted to another place.

5) The Administrator, Viz. Head Master, Government High School, Kadadi, Gadag Taluk shall be entitled to frame the suitable rules for the award of Scholorship.

6) The Administrator, shall give adequate publicity to the scheme so that all the candidates in Government High School, Kadadi, Gadag Taluk, may avail of the opportunity.

All other remaining Terms and Conditions are remain the same Mentioned in the Previous Gazette Notification Published in 26th April, 2001.

The above Corrigendum Notification comes into force from the date of its publication in the official Gazette.

Director

PR-407 Office of the Commissioner For Public Instruction, Dharwad.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತಿಲಕ್‌ನಗರ, ನೆಹರು ಕ್ರೀಡಾಂಗಣ ಎದುರು, ಶಿವಮೊಗ್ಗ**

**ಸಂಖ್ಯೆ: ಡಬ್ಲ್ಯೂಸಿಎ:ಸಿಆರ್–65/2008, ದಿನಾಂಕ:18ನೇ ಡಿಸೆಂಬರ್, 2008**

| ಅರ್ಜಿದಾರರು: | | ಪ್ರತಿವಾದಿಗಳು: |
|---|---|---|
| 1) ಶ್ರೀಮತಿ ಸುಧಾ ಕೋಂ ದಿ: ಶಿವಮೂರ್ತಿ @ ಶಿವು.<br>2) ಕೆ.ಎಸ್. ಶರತ್‌ಕುಮಾರ್ ಬಿನ್ ದಿ:ಶಿವಮೂರ್ತಿ @ ಶಿವು.<br>3) ಕೆ.ಎಸ್. ನಾಗರಾಜ್ ಬಿನ್ ದಿ:ಶಿವಮೂರ್ತಿ @ ಶಿವು.<br>4) ಕೆ.ಎಸ್. ರಂಜಿತ ಬಿನ್ ದಿ:ಶಿವಮೂರ್ತಿ @ ಶಿವು.<br>5) ಶ್ರೀಮತಿ ಗೌರಮ್ಮ ಕೋಂ ದಿ: ರಾಮಪ್ಪ ಕೆರೆಕಟ್ಟೆ, ಚನ್ನಗಿರಿ ತಾ: ದಾವಣಗೆರೆ ಜಿಲ್ಲೆ. | ವಿರುದ್ಧ | 1) ಕೃಷ್ಣಪ್ಪ ಬಿನ್ ಯಲ್ಲಪ್ಪ ಬೊಂಬು ವ್ಯಾಪಾರಿ, ಲಾರಿ ಮಾಲೀಕರು, ಲಾರಿ ನಂ.ಕೆಎ–30:2752, ಪದ್ಮ ಟಾಕೀಸ್ ಹಿಂಭಾಗ, ತುಂಗಾ ನಗರ, ಶಿವಮೊಗ್ಗ.<br>2) ಇಮ್ತಿಯಾಜ್ ಬಿನ್ ಬಶೀರ್, ಇಲಿಯಾಜ್ ನಗರ, ಡ್ರೈವರ್, ಲಾರಿ ನಂ.ಕೆಎ–30–2752, ತುಂಗಾನಗರ, ಶಿವಮೊಗ್ಗ.<br>3) ನ್ಯೂ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಶಿವಮೊಗ್ಗ. |

**ಅಧಿಸೂಚನೆ**

ಅರ್ಜಿದಾರರು ದಿ:ಶಿವಮೂರ್ತಿ @ ಶಿವು, ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ:16.02.2008ರಂದು ಸಂಭವಿಸಿದ ಅಪಘಾತದಲ್ಲಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ ಇನ್ನಿತರೇ ಯಾವುದೇ ರೀತಿಯ ತಕರಾರು

ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಎಂದು ತಿಳಿಸಲಾಗಿದೆ.

**ಎಸ್. ವಿಜಯ್‌ಕುಮಾರ್**

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು, ಶಿವಮೊಗ್ಗ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತಿಲಕ್‌ನಗರ, ನೆಹರು ಕ್ರೀಡಾಂಗಣ ಎದುರು, ಶಿವಮೊಗ್ಗ**

**ಸಂಖ್ಯೆ: ಡಬ್ಲ್ಯೂಸಿಎ:ಸಿಆರ್–66/2008, ದಿನಾಂಕ:18ನೇ ಡಿಸೆಂಬರ್, 2008**

| ಅರ್ಜಿದಾರರು: | | ಪ್ರತಿವಾದಿಗಳು: |
|---|---|---|
| 1) ಶ್ರೀಮತಿ ಜಯಮ್ಮ ಕೋಂ ಜೆ. ಶೇಷಪ್ಪ, ಹರಿಗೆ, ಶಿವಮೊಗ್ಗ.<br>2) ಜೆ. ಶೇಷಪ್ಪ ಬಿನ್ ಜವೇರಪ್ಪ, ಹರಿಗೆ, ಶಿವಮೊಗ್ಗ. | ವಿರುದ್ಧ | 1) ಸಿ. ಜಗದೀಶ್ ಬಿನ್ ಸಿ.ಬಿ. ಚಂದ್ರಪ್ಪ ಟ್ರಕ್ ನೋಂದಣಿ ಸಂಖ್ಯೆ: ಕೆಎ–16–ಎ–8433ರ ಮಾಲೀಕರು, ಎಸ್.ಜಿ.ಕೆ. ಟ್ರಾನ್ಸ್‌ಪೋರ್ಟ್ ಮಾಲೀಕರು, ವಾಸ: ಕೊಟ್ಟೂರೇಶ್ವರ ನಿಲಯ, ಅಮೋಘ ಸೆಂಟರ್ ಹಿಂಭಾಗ, ಸಂತೆಹೊಂಡ ಹತ್ತಿರ, ಚಿತ್ರದುರ್ಗ.<br>2) ಬಜಾಜ್ ಅಲಿಯನ್ಸ್ ಜನರಲ್ ಇನ್ಸೂರೆನ್ಸ್ ಕಂ.ಲಿ., ಬ್ಯಾಜಿಕ್, ಕೆ.ಎನ್.ವಿ. ಕಾಂಪ್ಲೆಕ್ಸ್, 4ನೇ ತಿರುವು, ವಿದ್ಯಾನಗರ, ಬಿ.ಹೆಚ್. ರಸ್ತೆ, ತುಮಕೂರು. |

**ಅಧಿಸೂಚನೆ**

ಅರ್ಜಿದಾರರು ದಿ: ಎಸ್.ರವಿ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ:17.06.2008ರಂದು ಸಂಭವಿಸಿದ ಅಪಘಾತದಲ್ಲಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಎಂದು ತಿಳಿಸಲಾಗಿದೆ.

**ಎಸ್. ವಿಜಯ್‌ಕುಮಾರ್**

ಪಿ.ಆರ್.47

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು, ಶಿವಮೊಗ್ಗ.

**ಸಹಕಾರ ಇಲಾಖೆ**

**ನಮೂನೆ–10**

**ಕರ್ನಾಟಕ ಸಹಕಾರ ಸಂಘಗಳ ಕಾಯಿದೆ, 1959ರ ಅಡಿಯಲ್ಲಿ ರೂಪಿಸಲಾಗಿರುವ ನಿಯಮಗಳನ್ವಯ 38ನೇ ರೂಲಿನ 7ನೆಯ ಕಾಲಂ ಪ್ರಕಾರ ನೀಡಿರುವ 'ಸೇಲ್ ಸರ್ಟಿಫಿಕೇಟ್'**

**ಹೆಸರು:** ಮೊಹಮ್ಮದ್ ಉಮರ್, ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ.441) ಹಾಗೂ ವಸೂಲಾಧಿಕಾರಿ, ದಿ ಹಿರಿಯೂರು ಅರ್ಬನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಹಿರಿಯೂರು, ಚಿತ್ರದುರ್ಗ ಜಿಲ್ಲೆ.

ಅಮಲ್ಜಾರಿ ಅರ್ಜಿ ಸಂಖ್ಯೆ: ಎಆರ್‌ಇ/ಹೆಚ್‌ಯುಬಿ/464/04–05/424(ವ)/08–09, ಪ್ರಧಾನ ವ್ಯವಸ್ಥಾಪಕರು, ದಿ ಹಿರಿಯೂರು ಅರ್ಬನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಹಿರಿಯೂರು–ಡಿಕ್ರಿದಾರರು

**ವಿರುದ್ಧ**

ಶ್ರೀ ಕೆ.ಸದಾನಂದ ಬಿನ್ ಕೃಷ್ಣಪ್ಪ, ಗಾರ್ಮೆಂಟ್ಸ್ ಕಾಂಪ್ಲೆಕ್ಸ್, ಹಿರಿಯೂರು–ಬಾಕಿದಾರರು.

ಈ ಮೂಲಕ ದೃಢೀಕರಿಸುವುದೇನೆಂದರೆ ಶ್ರೀಮತಿ ಕಸ್ತೂರಿ ಕೋಂ ಲೇಟ್ ಶ್ರೀಧರ್ (ಜಾತಿ) ಈಡಿಗ (ಧರ್ಮ) ಹಿಂದೂ, (ವೃತ್ತಿ) ಗೃಹಿಣಿ (ವಾಸಸ್ಥಳ) ಹುಳಿಯೂರು ರಸ್ತೆ, ಹಿರಿಯೂರು ಟೌನ್, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಇವರು, ಮಾರಾಟಾಧಿಕಾರಿ ದಿ ಹಿರಿಯೂರು ಅರ್ಬನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಹಿರಿಯೂರು, ಇವರು ನಡೆಸಿದ ಬಹಿರಂಗ ಹರಾಜಿನಲ್ಲಿ ಈ ಕೆಳಗೆ ತೋರಿಸಿದ ಸ್ಥಿರ ಸ್ವತ್ತುಗಳನ್ನು ಕೊಂಡಿದ್ದಾರೆ. ಸದರಿ ಸ್ಥಿರ ಸ್ವತ್ತುಗಳನ್ನು, ದಿ ಹಿರಿಯೂರು

ಅರ್ಬನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಹಿರಿಯೂರು ಇವರಿಗೆ ಶ್ರೀ ಕೆ. ಸದಾನಂದ ಬಿನ್ ಕೃಷ್ಣಪ್ಪ, ಗಾರ್ಮೆಂಟ್ಸ್, ಲಕ್ಷ್ಮಿ ಕಾಂಪ್ಲೆಕ್ಸ್, ಹಿರಿಯೂರು (ಜಾತಿ) ಈಡಿಗ (ಧರ್ಮ) ಹಿಂದೂ (ವೃತ್ತಿ) ವ್ಯಾಪಾರಿಗಳು ವಾಸಸ್ಥಳ: ಹುಳಿಯಾರ್ ರಸ್ತೆ, ಹಿರಿಯೂರು ಟೌನ್, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ, ಇವರಿಂದ ಬರಬೇಕಾದ ಬಾಕಿ ಮೊತ್ತಕ್ಕೆ, ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಇವರ ನ್ಯಾಯಾಲಯದಿಂದ ಡಿಕ್ರಿ/ ಅವಾರ್ಡ್/ ತೀರ್ಪು/ ಆದೇಶ ಸಂಖ್ಯೆ: 422/03–04 ದಿನಾಂಕ:26.05.2004ರ ರೀತ್ಯಾ ಅಮಲ್ಜಾರಿ ಕ್ರಮದಲ್ಲಿ ಹರಾಜು ಮಾಡಲಾಗಿ, ಕೊಂಡ ಮೊತ್ತ ರೂ.1,80,000/–ಗಳು ಸಂಪೂರ್ಣವಾಗಿ ಪಾವತಿಯಾಗಿದ್ದು, ನಾನು ದಿನಾಂಕ:31.12.2008 ರಂದು ಸದರಿ ಹರಾಜನ್ನು (ಮಾರಾಟವನ್ನು) ಖಾಯಂಗೊಳಿಸಿರುತ್ತೇನೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ.441) ಹಾಗೂ
ವಸೂಲಾಧಿಕಾರಿ,
ದಿ ಹಿರಿಯೂರು ಅರ್ಬನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಹಿರಿಯೂರು.

**ಸ್ಥಿರ ಸ್ವತ್ತುಗಳ ಷೆಡ್ಯೂಲ್**

ನೋಂದಣಿ ಜಿಲ್ಲೆ: ಚಿತ್ರದುರ್ಗ
ತಾಲ್ಲೂಕು : ಹಿರಿಯೂರು
ಗ್ರಾಮ : ಹಿರಿಯೂರು ಟೌನ್

**ಸ್ವತ್ತುಗಳ ವಿವರ**

ಶ್ರೀ ಕೆ. ಸದಾನಂದರವರ ಹೆಸರಿನಲ್ಲಿರುವ ಹಿರಿಯೂರು ಟೌನ್ 'ಎ' ಡಿವಿಜನ್, ಮುನಿಸಿಪಲ್ ಖಾತೆ ನಂ.1151, ಅಸೆಸ್‌ಮೆಂಟ್ ನಂ.737, ಅಂತ ದಾಖಲೆ ಇರುವ ಗುಡಿಸಲು ಮನೆ ಅಳತೆ 14.5x37 ಅಡಿಗಳು ಇದಕ್ಕೆ ಚಕ್ಕುಬಂದಿ:

ಪೂರ್ವಕ್ಕೆ: ರಸ್ತೆ
ಪಶ್ಚಿಮಕ್ಕೆ: ಮುನಿಸಿಪಲ್ ರಸ್ತೆ
ಉತ್ತರಕ್ಕೆ: ವೇಲಾಯುಧನ್ ರವರ ಸೈಟ್ ನಂ.10
ದಕ್ಷಿಣಕ್ಕೆ: ಚಿನ್ನಸ್ವಾಮಿ ರವರ ಸೈಟ್ ನಂ.8
ಹೆಸರು: ಶ್ರೀ ಕೆ. ಸದಾನಂದ ಬಿನ್ ಕೃಷ್ಣಪ್ಪ
ಒಟ್ಟು ವಿಸ್ತೀರ್ಣ 14.5x37
ಮಾರಾಟದ ಬೆಲೆ: ಒಟ್ಟು ರೂ.1,80,000/– (ರೂ. ಒಂದು ಲಕ್ಷ ಎಂಭತ್ತು ಸಾವಿರ ರೂ.ಗಳು ಮಾತ್ರ)
ಹರಾಜು ದಿನಾಂಕ: 25.10.2008.

ನನ್ನ ಸಹಿ ಮತ್ತು ಮುದ್ರೆಯೊಂದಿಗೆ ದಿನಾಂಕ:31.12.2008 ರಲ್ಲಿ ನೀಡಲ್ಪಟ್ಟಿದೆ.

ಸ್ಥಳ: ಹಿರಿಯೂರು
ದಿನಾಂಕ:31.12.2008

ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ.441) ಹಾಗೂ
ವಸೂಲಾಧಿಕಾರಿ,
ದಿ ಹಿರಿಯೂರು ಅರ್ಬನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಹಿರಿಯೂರು.

**ಫಾರಂ ನಂಬರು 11**

**(38ನೆಯ ರೂಲಿನ (7) ನೆಯ ಕಾಲಂ)**

**ಸ್ಥಿರ ಸ್ವತ್ತುಗಳನ್ನು ಕೊಂಡದಕ್ಕೆ ಪ್ರಕಟಣೆ**

ಚಿತ್ರದುರ್ಗ ಜಿಲ್ಲಾ, ಹಿರಿಯೂರು ತಾಲ್ಲೂಕು, ಹಿರಿಯೂರು ಟೌನ್ ಹುಳಿಯಾರು ರಸ್ತೆಯಲ್ಲಿರುವ ಶ್ರೀಮತಿ ಕಸ್ತೂರಿ ಕೋಂ ಲೇಟ್ ಶ್ರೀಧರ್ ಇವರು ಈ ಕೆಳಗೆ ತೋರಿಸಿದ ಸ್ಥಿರ ಸ್ವತ್ತುಗಳನ್ನು ಬಹಿರಂಗವಾಗಿ ಹರಾಜಿನಲ್ಲಿ 2008ನೇ ಇಸವಿ ಅಕ್ಟೋಬರ್ ತಿಂಗಳ 25ನೇ ತಾರೀಖಿನಲ್ಲಿ ಕ್ರಯಕ್ಕೆ ಪಡೆದುಕೊಂಡಿದ್ದಾಗಿಯೂ ಮತ್ತು ದರಖಾಸ್ತು ಹಣ ರೂ.1,80,000/–ಗಳನ್ನು ಸಂಪೂರ್ಣವಾಗಿ ಪಾವತಿ ಮಾಡಿದ್ದಾಗಿಯೂ ಈ ಮೂಲಕ ಎಲ್ಲಾ ಜನರಿಗೆ ಬಹಿರಂಗವಾಗಿ ತಿಳಿಸೋಣವಾಗುತ್ತದೆ. ಆದ ಪ್ರಯುಕ್ತ ಸದರಿ ಸ್ಥಿರಸ್ವತ್ತುಗಳಲ್ಲಿರುವ (ಬಾಕಿದಾರನ) ಎಲ್ಲಾ ಹಕ್ಕು–ವ–ಪ್ರಯೋಜನಗಳಿಗೆ ಸದರಿ ಶ್ರೀಮತಿ ಕಸ್ತೂರಿ ಕೋಂ ಲೇಟ್ ಶ್ರೀಧರ್ ಉತ್ತರಾಧಿಕಾರರಾಗಿದ್ದಾರೆ ಎಂಬುದಾಗಿ ಈ ಮೂಲಕ ದೃಢಪಡಿಸೋಣವಾಗುತ್ತಿದೆ.

| ಗ್ರಾಮ ಮತ್ತು ತಾಲ್ಲೂಕು | ಸ್ಥಿರಸ್ವತ್ತುಗಳ ವಿವರ ತರಹೆ | ವಿವರ | | | ಅಂದಾಜು ವಿಸ್ತೀರ್ಣ | ಷರಾ |
|---|---|---|---|---|---|---|
| | | ನಂ. | ಪೋಡು | ಖಾತೆದಾರನ ಹೆಸರು | | |
| ಹಿರಿಯೂರು ಟೌನ್ ಹಿರಿಯೂರು ತಾ: | ಗುಡಿಸಲು ಮನೆ | ಮುನಿಸಿಪಲ್ ಖಾತೆ ನಂ.1151 ಅ.ನಂ.737 | | ಶ್ರೀ ಕೆ. ಸದಾನಂದ ಬಿನ್ ಕೃಷ್ಣಪ್ಪ | 14.5x37 ಅಡಿಗಳು | |

ಮೊಕ್ಕಾಂ: ಹಿರಿಯೂರು
ದಿನಾಂಕ:31.12.2008
ಪಿ.ಆರ್.48

ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ.441) ಹಾಗೂ
ವಸೂಲಾಧಿಕಾರಿ,
ದಿ ಹಿರಿಯೂರು ಅರ್ಬನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಹಿರಿಯೂರು.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಕೋಲಾರ**
**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್.ಸಿ–20/08**

**ಅರ್ಜಿದಾರರು:**

1) ಶ್ರೀಮತಿ ಹೇಮಲತ ಕೋಂ ಲೇಟ್ ಮಲ್ಲಿಕಾರ್ಜುನ,
2) ಕುಮಾರಿ ಸನೇಹ D/o ಲೇಟ್ ಮಲ್ಲಿಕಾರ್ಜುನ
ವಾಸ: ಸಿಂಗಹಳ್ಳಿ, ವೇಮಗಲ್ ಹೋಬಳಿ, ಕೋಲಾರ ತಾ: ಮತ್ತು ಜಿಲ್ಲೆ.

ವಿರುದ್ಧ

**ಪ್ರತಿವಾದಿಗಳು:**

1) ಶ್ರೀ ಆರ್. ಸತೀಶ ಬಿನ್ ಆರ್. ನಾಗಪ್ಪ, ನಂ.3688, 2ನೇ ಕ್ರಾಸ್, ವಿಜಯನಗರ, ಬಂಗಾರಪೇಟೆ ಟೌನ್.
2) M/s ನ್ಯಾಷನಲ್ ಇನ್‌ಶೂರೆನ್ಸ್ ಕಂ.ಲಿ., 3ನೇ ಮಹಡಿ, ಯುನೈಟೆಡ್ ಕಟ್ಟಡ ಅನೆಕ್ಸ್, ನಂ.72, ಮಿಷನ್ ರಸ್ತೆ, ಬೆಂಗಳೂರು–27.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ಹೇಮಲತ ಅವರು ತಮ್ಮ ಗಂಡ ಲೇಟ್ ಮಲ್ಲಿಕಾರ್ಜುನ ಅವರು 1ನೇ ಪ್ರತಿವಾದಿ ಶ್ರೀ ಆರ್. ಸತೀಶ ರವರ ಬಳಿ ಚಾಲಕ: ಕ್ಲೀನರ್:ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ:29.12.2005ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ, ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಂ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸಲಾಗುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಹಾಗೂ ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ:13.10.2008 ರಂದು ನೀಡಲಾಗಿದೆ.

**ಎಸ್. ರೇವಣ್ಣ**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ ಉಪವಿಭಾಗ, ಕೋಲಾರ.

ಪಿ.ಆರ್.49

**ಕಂದಾಯ ಇಲಾಖೆ**

**ಪ್ರಾದೇಶಿಕ ಆಯುಕ್ತರ ಕಛೇರಿ, 2ನೇ ಮಹಡಿ, ಬಿ.ಎಂ.ಟಿ.ಸಿ. ಕಟ್ಟಡ, ಕೆ.ಹೆಚ್.ರಸ್ತೆ, ಶಾಂತಿನಗರ, ಬೆಂಗಳೂರು**

**ಅಧಿಸೂಚನೆ**

**ನಂ.ಪ್ರಾಆಕ/ಚುನಾವಣೆ/ಸಿಆರ್/70/08–09, ಬೆಂಗಳೂರು, ದಿನಾಂಕ:15ನೇ ಡಿಸೆಂಬರ್, 2008**

ತುಮಕೂರು ನಗರಸಭೆಯ ಅಧ್ಯಕ್ಷ ಮತ್ತು ಉಪಾಧ್ಯಕ್ಷರು ವಿರುದ್ಧ ಅವಿಶ್ವಾಸ ಸೂಚನೆ ಅಂಗೀಕರಿಸಲಾದ ಕಾರಣ ತೆರವಾದ ಸ್ಥಾನಗಳಿಗೆ ದಿನಾಂಕ:20.10.2008 ರಂದು ಚುನಾವಣೆ ನಡೆದು ಅಧ್ಯಕ್ಷರ ಸ್ಥಾನಕ್ಕೆ ಶ್ರೀ ಬಿ.ಎಸ್. ರವೀಶ್ ಹಾಗೂ ಉಪಾಧ್ಯಕ್ಷರ ಸ್ಥಾನಕ್ಕೆ ಶ್ರೀ ಹನುಮಂತರಾಯಪ್ಪ (ಹೆಚ್.ರಾಯಪ್ಪ) ಇವರು ಆಯ್ಕೆಯಾಗಿರುತ್ತಾರೆಂದು, ಚುನಾವಣಾಧಿಕಾರಿಗಳು ಘೋಷಿಸಿದ್ದು ಇವರ ಹೆಸರುಗಳನ್ನು ಅಧಿಸೂಚಿಸುವಂತೆ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು ಇವರು ತಮ್ಮ ಪತ್ರ ಸಂಖ್ಯೆ:ಚು(2).ವಿವ.21/08–09 ದಿನಾಂಕ:31.10.2008ರಂತೆ ಕೋರಿರುತ್ತಾರೆ.

ಕರ್ನಾಟಕ ಮುನಿಸಿಪಾಲಿಟಿ (ಅಧ್ಯಕ್ಷರ ಹಾಗೂ ಉಪಾಧ್ಯಕ್ಷರ ಚುನಾವಣೆ (ತಿದ್ದುಪಡಿ) ನಿಯಮಾವಳಿ 1980 ನಿಯಮ 12ರ ಪ್ರಕಾರ ತುಮಕೂರು ನಗರಸಭೆಗೆ ಚುನಾಯಿತರಾದ ಅಧ್ಯಕ್ಷ ಹಾಗೂ ಉಪಾಧ್ಯಕ್ಷರ ಹೆಸರನ್ನು ಅಧಿಸೂಚಿಸಲಾಗಿದೆ.

| ಕ್ರ. ಸಂ. | ನಗರಸಭೆಯ ಹೆಸರು | ಮೀಸಲಿರಿಸಿದ ಪ್ರವರ್ಗ | ಆಯ್ಕೆಯಾದ ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ | ಆಯ್ಕೆಯಾದ ಸ್ಥಾನ |
|---|---|---|---|---|
| 1. | ತುಮಕೂರು | ಸಾಮಾನ್ಯ | ಶ್ರೀ ಬಿ.ಎಸ್. ರವೀಶ್ ಬಿನ್ ಶಿವಲಿಂಗಯ್ಯ, ನಳಂದಶಾಲೆ ರಸ್ತೆ, ರಾಘವೇಂದ್ರನಗರ, ತುಮಕೂರು. | ಅಧ್ಯಕ್ಷ |
| 2. | ತುಮಕೂರು | ಪರಿಶಿಷ್ಟ ಜಾತಿ | ಶ್ರೀ ಹನುಮಂತರಾಯಪ್ಪ (ಹೆಚ್.ರಾಯಪ್ಪ) ಮೆಳೇಕೋಟೆ, ತುಮಕೂರು. | ಉಪಾಧ್ಯಕ್ಷ |

ಪ್ರಾದೇಶಿಕ ಆಯುಕ್ತರು,
ಬೆಂಗಳೂರು ವಿಭಾಗ.

ಪಿ.ಆರ್.50

## ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ತುಮಕೂರು ಜಿಲ್ಲೆ ಇವರ ನಡವಳಿಕೆಗಳು

**ವಿಷಯ:** ಶ್ರೀ ಟಿ.ಆರ್.ವಿ. ಪ್ರಸಾದ್ ಬಿನ್ ಶ್ರೀ ರತ್ನಯ್ಯಶೆಟ್ಟಿ ಮಾಜಿ ಆಡಳಿತ ಮಂಡಳಿ ಸದಸ್ಯರು ಟಿ.ಎ.ಪಿ.ಸಿ.ಎಂ.ಎಸ್. ಪಾವಗಡ, ವಾಸ: ವೈ.ಎನ್. ಹೊಸಕೋಟೆ ಇವರ ಕಾನೂನು ವಾರಸುದಾರರಾದ ತಾಯಿ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ದಿನಾಂಕ:08.01.2008ರಂದು ನಡೆದ ಬಹಿರಂಗ ಹರಾಜು ಮಾರಾಟದಲ್ಲಿ ಬಿಡ್‌ದಾರರು ಬಾರದ ಪ್ರಯುಕ್ತ ಸ್ಥಿರ ಸ್ವತ್ತುಗಳನ್ನು ಸದರಿ ಸಂಘದ ಹೆಸರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಉಲ್ಲೇಖ:** 1) ಮಾರಾಟಾಧಿಕಾರಿ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ ಮಧುಗಿರಿ ಉಪವಿಭಾಗ ಮಧುಗಿರಿ ಇವರ ಪ್ರಸ್ತಾವನೆ ಪತ್ರದ ಕ್ರಮಾಂಕ ಸ.ನಿ.33:ಮಾ.ಅ:ಇ.ಪಿ.:1: 2005-06, ದಿನಾಂಕ:29.02.2008.

2) ಈ ಕಛೇರಿಯ ಈ ಕೆಳಕಂಡ ಸಮಸಂಖ್ಯೆ ಪತ್ರದ ದಿನಾಂಕ:21.08.2008.

3) ಕಾರ್ಯದರ್ಶಿ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಪಾವಗಡ ಇವರ ಪತ್ರದ ಕ್ರಮಾಂಕ:ಟಿ.ಎ.ಪಿ.ಸಿ.ಎಂ.ಎಸ್. ಪಿ.ವಿ.ಬಿ:16:2008-09, ದಿನಾಂಕ:14.10.2008.

**ಪ್ರಸ್ತಾವನೆ:**

ಪಾವಗಡ ಟೌನ್‌ನಲ್ಲಿರುವ ಪಾವಗಡ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ. ಪಾವಗಡ ಸಹಕಾರ ಸಂಘವು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ನಿಯಮ 1960ರ ಅನ್ವಯ ನೊಂದಾವಣೆಯಾಗಿದ್ದು ನೊಂದಣಿಗೊಂಡ ಉಪನಿಯಮಗಳ ಅನ್ವಯ ಕಾರ್ಯನಿರ್ವಹಿಸುತ್ತಿದೆ. ಈ ಸಹಕಾರ ಸಂಘದ ಆಡಳಿತ ಮಂಡಳಿ ಸದಸ್ಯರಾಗಿದ್ದ ಶ್ರೀ ಟಿ.ಆರ್.ವಿ. ಪ್ರಸಾದ್ ಇವರು ಸಂಘದ ಹಣವನ್ನು ದಿನಾಂಕ:30.03.2002 ರಂದು ಪಡೆದುಕೊಂಡು ದುರುಪಯೋಗ ಪಡಿಸಿಕೊಂಡ ಹಿನ್ನೆಲೆಯಲ್ಲಿ ಇವರ ಮೇಲೆ ಅಧಿಭಾರ ಅರ್ಜಿಸಂಖ್ಯೆ ಡಿ.ಆರ್.ಟಿ.5:2003-04ರ ರೀತ್ಯಾ ದಾವೆಯನ್ನು ಹೂಡಿ ವಿಚಾರಣೆ ನಡೆಸಿ ದಿನಾಂಕ:20.12.2004 ರಂದು ರೂ.66,000=00ಗಳನ್ನು ಶೇ.18% ರ ಬಡ್ಡಿ ಸೇರಿಸಿ ವಸೂಲಿ ಮಾಡಿಕೊಳ್ಳಲು ಆದೇಶ ನೀಡಿರುತ್ತದೆ. ನಂತರ ಅದು ಅಮಲ್ಜಾರಿ ನಂ.1:2005-06 ದಿನಾಂಕ:21.05.2006ರ ಪ್ರಕಾರ ಸಂಬಂಧಪಟ್ಟ ಪ್ರಾಧಿಕಾರವಾದ ಈ ಕಛೇರಿಯಲ್ಲಿ ದಾಖಲು ಮಾಡಿ ರೂ.91964=00ಗಳಿಗೆ ಅಮಲ್ಜಾರಿ ಪಡೆಯಲಾಗಿದೆ.

ತೀರ್ಪಿನ ನಂತರದಲ್ಲಿಯೂ ಸಹ ಡಿಕ್ರಿಬಾಕಿ ಹಣವು ಸಂಘಕ್ಕೆ ಜಮ ಆಗದೇ ಇದ್ದ ಕಾರಣದಿಂದ ವಸೂಲಿ ಕ್ರಮಕ್ಕಾಗಿ ತೀರ್ಪುಋಣದಾರರ ಮೇಲೆ ಅಮಲ್ಜಾರಿ ಕ್ರಮ ಜರುಗಿಸಲು ಈ ಕಛೇರಿಯಲ್ಲಿರುವ ಸರ್ಕಾರಿ ಮಾರಾಟಾಧಿಕಾರಿಗಳಿಗೆ ವಸೂಲಿ ಕ್ರಮ ಕೈಗೊಳ್ಳಲು ಈ ಕಡತವನ್ನು ವಹಿಸಲಾಗಿತ್ತು ಸದರಿ ಮಾರಾಟಾಧಿಕಾರಿಯವರು ವಸೂಲಿ ಕ್ರಮದ ಅಡಿಯಲ್ಲಿ ಫಾರಂ ನಂ.2ರ ನೋಟೀಸನ್ನು 6ರ ಫಾರಂನ್ನು ಜಾರಿ ಮಾಡಿಸಿರುತ್ತಾರೆ ತೀರ್ಪುಋಣದಾರರು ಸ್ವತಃ ಈ ನೋಟೀಸ್‌ಗಳನ್ನು ಸ್ವೀಕರಿಸಿರುತ್ತಾರೆ ಆಗಲೂ ಅವಾರ್ಡ್ ಮೊತ್ತವನ್ನು ಮರುಪಾವತಿಸಿರುವುದಿಲ್ಲ ಆಗ ಅವರ ಹಕ್ಕಿಗೆ ಒಳಪಡುವ ಸ್ಥಿರಾಸ್ತಿಗಳನ್ನು ಫಾರಂ ನಂ.7ರ ಮೂಲಕ ಜಪ್ತಿ ಮಾಡಿ ನೋಟೀಸನ್ನು ಮನೆಯ ಬಾಗಿಲಿಗೆ ಅಂಟಿಸುವುದರ ಮೂಲಕ ಜಾರಿಗೊಳಿಸಿ ಸಾಕ್ಷಿಗಳ ಸಹಿ ಪಡೆಯಲಾಗಿದೆ ಆದಾಗ್ಯೂ ದುರುಪಯೋಗದ ಮೊತ್ತವನ್ನು ಮರುಪಾವತಿಸಿರುವುದಿಲ್ಲ ಆಗ ಈ ಕೆಳಕಂಡ ಷೆಡ್ಯೂಲ್ ಸ್ಥಿರ ಸ್ವತ್ತುಗಳನ್ನು ದಿನಾಂಕ:08.01.2008 ರಂದು ಬಹಿರಂಗಹರಾಜು ಮಾಡಲು ನಿಗದಿಪಡಿಸಿ ಈ ಸಂಬಂಧದ ಫಾರಂ ನಂ.8, 9 ಮತ್ತು ಹರಾಜು ಇಸ್ತಿಹಾರ್‌ಗಳನ್ನು ತೀರ್ಪುಋಣಿದಾರರಿಗೆ ಜಾರಿಗೊಳಿಸಿರುತ್ತದೆ ಆದರೆ ಸದರಿ ಬಹಿರಂಗ ಹರಾಜಿನಲ್ಲಿ ಬಿಡ್‌ದಾರರು ಯಾರೂ ಪಾಲ್ಗೊಳ್ಳದೇ ಇದ್ದುದರಿಂದ ಡಿಕ್ರಿಬಾಕಿದಾರನ ಹಕ್ಕಿಗೆ ಒಳಪಡುವ ಅವರ ತಾಯಿಯ ಹೆಸರಿನಲ್ಲಿರುವ ಸ್ಥಿರಸ್ವತ್ತುಗಳನ್ನು ಸಂಘಕ್ಕೆ ಬರಬೇಕಾದ ಅಸಲು, ಬಡ್ಡಿ, ಸುಸ್ತಿಬಡ್ಡಿ ದಾವಾಶುಲ್ಕ ಅಮಲ್ಜಾರಿ ಶುಲ್ಕ ಮತ್ತು ಇತರೆ ಖರ್ಚುಗಳು ಸೇರಿ ಒಟ್ಟು ರೂ.76,800=00 ಬಾಕಿ ಇರುವುದಾಗಿ ಮಾರಾಟಾಧಿಕಾರಿಗಳು ಸಲ್ಲಿಸಿರುವ ಚೆಕ್‌ಲಿಸ್ಟ್‌ನಿಂದ ತಿಳಿದು ಬಂದಿದೆ.

ಷೆಡ್ಯೂಲ್‌ನಲ್ಲಿ ತೋರಿಸಿರುವ ಸ್ಥಿರಾಸ್ತಿಗಳನ್ನು ಕಕ್ಷಿದಾರನ ವಾದಿ ಸಂಘಕ್ಕೆ ವರ್ಗಾಯಿಸಲು ವಿವರವಾದ ನೋಟೀಸನ್ನು ಉಲ್ಲೇಖ (2)ರ ರೀತ್ಯ ನೀಡಲಾಗಿತ್ತು. ಈ ನೋಟೀಸನ್ನು ತೀರ್ಪುಋಣದಾರರು ಆರ್.ಪಿ.ಎ.ಡಿ. ಮೂಲಕ ಸ್ವೀಕರಿಸಿರುತ್ತಾರೆ ಆದರೂ ತೀರ್ಪುಋಣದಾರರು ಮರುಪಾವತಿ ಮಾಡದ ಕಾರಣ ಈ ಕಛೇರಿಯ ಮಾರಾಟಾಧಿಕಾರಿಗಳು ಯಾರೂ ಬಿಡ್‌ದಾರರು ಬರಲಿಲ್ಲವಾದ ಕಾರಣದಿಂದ ವಾದಿ ಸಂಘದ ಹೆಸರಿಗೆ ಬಿಡ್‌ನಿಲ್ಲಿಸಿರುವುದನ್ನು (ಪ್ರಕ್ರಿಯೆ ಮುಂದುವರೆಸಿ) ಒಪ್ಪಿ ಈ ಕೆಳಕಂಡ ಡಿಕ್ರಿ ಬಾಕಿದಾರನ ಅನ್ವಯ ಭಾಗಶಃ ಸ್ಥಿರ ಸ್ವತ್ತನ್ನು ಡಿಕ್ರಿಹೊಂದಿದ ಪಾವಗಡ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಪಾವಗಡ ತುಮಕೂರು ಜಿಲ್ಲೆ ಇದರ ಹೆಸರಿಗೆ ಈ ಕೆಳಕಂಡಂತೆ ವರ್ಗಾವಣೆ ಆದೇಶ ಮಾಡಿ ನೀಡಲಾಗಿದೆ.

## ಆದೇಶ

**ಸಂಖ್ಯೆ: ಸ.ಸಂ.ಸ.ನಿ.33:ಎ.ಬಿ.ಎನ್:ಇ.ಎಕ್ಸ್.ಎನ್:ಸ್ಥಿ.ವ.53:2008–09, ದಿನಾಂಕ:17ನೇ ಡಿಸೆಂಬರ್, 2008**

ಶ್ರೀ ಹೆಚ್.ಡಿ. ಶಿವಣ್ಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪ ವಿಭಾಗ, ಮಧುಗಿರಿ ಆದನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 101 ಬಿ ರ ಕಲಂ ಕರ್ನಾಟಕ ರಾಜ್ಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂ.ಡಬ್ಲ್ಯೂ:69:ಸಿ.ಎಲ್.ಎಂ. 2001, ದಿನಾಂಕ:21.11.2001 ರ ರೀತ್ಯ ನನಗೆ ದತ್ತವಾಗಿದ್ದು ಇದರ ಪ್ರಕಾರ ಶ್ರೀ ಟಿ.ಆರ್.ವಿ. ಪ್ರಸಾದ್ ಮಾಜಿ ನಿರ್ದೇಶಕರು ಇವರ ತಾಯಿ (ಕಾನೂನು ವಾರಸುದಾರರು) ಶ್ರೀಮತಿ ಭಾಗ್ಯಲಕ್ಷ್ಮಮ್ಮ ಕೋಂ ಟಿ.ವಿ. ರತ್ನಯ್ಯಶೆಟ್ಟಿ, ವೈ.ಎನ್. ಹೊಸಕೋಟೆ ಪಾವಗಡ ತಾಲ್ಲೂಕು ತುಮಕೂರು ಜಿಲ್ಲೆ ಇವರ ಹೆಸರಿನಲ್ಲಿರುವ ಈ ಕೆಳಕಂಡ ಷೆಡ್ಯೂಲ್ ಸ್ಥಿರ ಸ್ವತ್ತುಗಳನ್ನು ವಾದಿ (ಬಿಡ್ಜ್‌ಮೆಂಟ್ ಹೋಲ್ಡರ್) ಸಂಘವಾದ ಪಾವಗಡ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಪಾವಗಡ ತುಮಕೂರು ಜಿಲ್ಲೆ ಇದರ ಹೆಸರಿಗೆ ವರ್ಗಾವಣೆ ಆದೇಶ ನೀಡಿರುತ್ತೇನೆ. ಕಾಯಿದೆ ಅನ್ವಯ ನಮೂನೆಗಳನ್ನು ನಿಗದಿತ ನಮೂನೆಯಲ್ಲಿ ಸ್ಥಿರ ಸ್ವತ್ತುಗಳ ವರ್ಗಾವಣೆ ಪತ್ರವನ್ನು ಅಲಾಯಿದೆ ನೀಡಲಾಗಿರುವುದನ್ನು ಈ ಆದೇಶಕ್ಕೆ ಲಗತ್ತಿಸಲಾಗಿದೆ.

ಈ ಆದೇಶವನ್ನು ಕಛೇರಿಯ ಮುದ್ರೆ ಮತ್ತು ನನ್ನ ಸ್ವಹಸ್ತಾಕ್ಷರದ ಸಹಿಯೊಂದಿಗೆ ಈ ದಿನ ದಿನಾಂಕ:17.12.2008ರಂದು ಸ್ವತ್ತನ್ನು ವರ್ಗಾವಣೆ ಮಾಡಿ ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

## ನಮೂನೆ–8

**(ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಬಂಧನೆ–38ಎ ನೋಡಿ)**

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101ರ ಅನ್ವಯ ಪರಭಾರೆಯ ಬಗ್ಗೆ ಪ್ರಮಾಣ ಪತ್ರ:**

ಪಾವಗಡ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ.ಪಾವಗಡ ತುಮಕೂರು ಜಿಲ್ಲೆ ಇದರ ಕಾರ್ಯದರ್ಶಿಯವರು ಪಡೆದ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 69ರ ಅನ್ವಯ ಆದೇಶವನ್ನು ಜಾರಿ ಮಾಡಿರುವುದರಿಂದ ಶ್ರೀ ಟಿ.ಆರ್.ವಿ. ಪ್ರಸಾದ್ ಬಿನ್ ಶ್ರೀ ಟಿ.ವಿ. ರತ್ನಯ್ಯಶೆಟ್ಟಿ ಮಾಜಿ ನಿರ್ದೇಶಕರು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಪಾವಗಡ (ಖಾಯಂ ವಿಳಾಸ ವೈ.ಎನ್. ಹೊಸಕೋಟೆ ಪಾವಗಡ ತಾಲ್ಲೂಕು) ಇವರ ಕಾನೂನು ವಾರಸುದಾರರಾದ ತಾಯಿ ಹೆಸರಿನಲ್ಲಿದ್ದ ಸ್ಥಿರ ಸ್ವತ್ತುಗಳ ಮಾರಾಟದ ಬಗ್ಗೆ ದಿನಾಂಕ:08.01.2008ರಂದು ಬಹಿರಂಗ ಹರಾಜು ಇಟ್ಟಿದ್ದು ಹರಾಜಿನಲ್ಲಿ ಕೊಂಡುಕೊಳ್ಳುವವರು ಯಾರೂ ಬಿಡ್‌ದಾರರು ಬರಲಿಲ್ಲವಾದ್ದರಿಂದ ಸದರಿ ಸ್ವತ್ತನ್ನು ಮಾರಾಟ ಮಾಡಲಾಗಲಿಲ್ಲ ಎಂಬುದಾಗಿ ಮಾರಾಟಾಧಿಕಾರಿಯು ತಿಳಿಸಿರುವುದನ್ನು ನಾನು ಸಮಾಧಾನ ಹೊಂದಿರುತ್ತೇನೆ.

ಸದರಿ ಸ್ವತ್ತಿನಲ್ಲಿ ಡಿಕ್ರಿಬಾಕಿದಾರನ ಹಕ್ಕು ಅಧಿಕಾರ ನಾಮ ಮತ್ತು ಬಾಧ್ಯತೆ ಕೋ–ಆಪರೇಟಿವ್ ಸಂಘ ನಿ., ಪಾವಗಡ ಈ ಸಂಘದಲ್ಲಿ ನಿರ್ದಿಷ್ಟವಾಗಿರತಕ್ಕದ್ದೆಂದು ಮತ್ತು ಈ ಆದೇಶಕ್ಕೆ ಸೇರಿಸಲ್ಪಟ್ಟ ಅಧಿಸೂಚನೆಯಲ್ಲಿ ವಿಧಿಸಲಾದ ಷರತ್ತುಗಳಿಗೆ ಮತ್ತು ನಿಯಮಗಳಿಗೆ ಒಳಪಟ್ಟು ಕೋ–ಅಪರೇಟಿವ್ ಸಂಘ ನಿ., ಪಾವಗಡ ಇದಕ್ಕೆ ಒಪ್ಪಿಸತಕ್ಕದ್ದೆಂದು ಸದರಿ ಅಧಿನಿಯಮದ 101ಬಿ ಪ್ರಕರಣದ ಅನ್ವಯ ಈ ಮೂಲಕ ಆದೇಶ ನೀಡಲಾಗಿದೆ.

**ವರ್ಗಾವಣೆಗೊಂಡ ಸ್ಥಿರ ಸ್ವತ್ತಿನ ಷೆಡ್ಯೂಲ್ ವಿವರ**

| ಕ್ರ. ಸಂ. | ಖಾತೆದಾರನ ಹೆಸರು: ವಿಳಾಸ | ಖಾತೆ ನಂ. | ವಿಸ್ತೀರ್ಣ | ತರಹೆ | ಚಕ್ಕುಬಂದಿ |
|---|---|---|---|---|---|
| 1. | ಭಾಗ್ಯಲಕ್ಷ್ಮಮ್ಮ ಕೋಂ ಟಿ.ವಿ. ರತ್ನಯ್ಯಶೆಟ್ಟಿ, ವೈ.ಎನ್. ಹೊಸಕೋಟೆ, ಪಾವಗಡ ತಾಲ್ಲೂಕು. | 532 389 | 1) 56x26$^1/_2$ ಅಡಿಗಳ ಕಲ್ಲುಗೋಡೆ 2) 3x30 ಅಡಿಗಳ ಮಾಳಿಗೆ ಮನೆ 3) 11x26$^1/_2$ ಅಡಿಗಳ ಮಹಡಿ | ಮನೆ | ಪೂರ್ವ: ರಸ್ತೆ ಪಶ್ಚಿಮ: ಗಲ್ಲಿ ಉತ್ತರ: ಎ.ಆರ್. ನಾಗರಾಜು ರವರ ಮನೆ. ದಕ್ಷಿಣ:ಲಕ್ಷ್ಮಿದೇವಮ್ಮನವರ ಮನೆ. |

**ಷರತ್ತು ಮತ್ತು ನಿಯಮಗಳು**

1) ಸಂಘಕ್ಕೆ ವರ್ಗಾವಣೆ ಮಾಡಲಾದ ಸ್ಥಿರ ಸ್ವತ್ತುಗಳನ್ನು ಸಂಘವೇ ಉಪಯೋಗಿಸತಕ್ಕದ್ದು.

2) ಪುನಃ ಮಾರಾಟ ಮಾಡುವ ಸಂದರ್ಭದಲ್ಲಿ ಸ್ಥಿರಾಸ್ತಿಗಳ ಅವಿಭಕ್ತ ಕುಟುಂಬದ ಸದಸ್ಯರಿಗೆ ಆದ್ಯತೆ ನೀಡತಕ್ಕದ್ದು.

3) ಈ ಮಾರಾಟದ ವರ್ಗಾವಣೆ ಆದೇಶ ತಲುಪಿದ ಒಂದು ವಾರದೊಳಗಾಗಿ ಮಾರಾಟದ ಹಣವನ್ನು ಸಂಘಕ್ಕೆ ಜಮ–ಖರ್ಚು ಮಾಡಿಕೊಳ್ಳತಕ್ಕದ್ದು.

ಸ್ಥಳ: ಮಧುಗಿರಿ
ದಿನಾಂಕ:17.12.2008
ಪಿ.ಆರ್.51

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

**ಜಿಲ್ಲಾ ನ್ಯಾಯಾಧೀಶರು ಮತ್ತು ಶಿಸ್ತು ಪ್ರಾಧಿಕಾರ ಅಧಿಕಾರಿ, ಮಂಡ್ಯ ಇಲಾಖಾ ತನಿಖೆ ನಂ.5/2007**

**ಕರ್ನಾಟಕ ಸರ್ಕಾರ ವಿರುದ್ಧ** ಶ್ರೀ ಜಿ. ಕುಮಾರ್, ಬೆರಳಚ್ಚುಗಾರರು, ಸಿವಿಲ್ ಜಡ್ಜ್ (ಹಿ.ವಿ.) ನ್ಯಾಯಾಲಯ, ಮದ್ದೂರು,
ವಾಸ: ಮನೆ ನಂ.712, ಮೊದಲನೇ ಕ್ರಾಸ್, ಹಳೆ ಅಂಚೆ ಕಛೇರಿ ರಸ್ತೆ, ಗುತ್ತಲು ಕಾಲೋನಿ, ಮಂಡ್ಯ.

**ಅಂತಿಮ ಆದೇಶದ ಪ್ರಕಟಣೆ**

ಶ್ರೀ ಜಿ. ಕುಮಾರ್, ಬೆರಳಚ್ಚುಗಾರರ ವಿರುದ್ಧ ಇಲಾಖಾ ತನಿಖೆಯಲ್ಲಿ ಆರೋಪಣಾ ಪಟ್ಟಿಯಲ್ಲಿ ಆರೋಪಿಸಲಾಗಿರುವ ಆರೋಪವು ಸಾಬೀತಾಗಿರುವುದರಿಂದ ಜಿಲ್ಲಾ ನ್ಯಾಯಾಧೀಶರು ಮತ್ತು ಶಿಸ್ತು ಪ್ರಾಧಿಕಾರ ಅಧಿಕಾರಿ, ಮಂಡ್ಯ ರವರು ದಿನಾಂಕ:19.12.2008 ರಂದು ದಂಡನೀಯ ಕ್ರಮ ಜರುಗಿಸಿ ಅಂತಿಮ ಆದೇಶವನ್ನು ಈ ಕೆಳಕಂಡಂತೆ ಮಾಡಿರುತ್ತಾರೆ.

1) ತಪ್ಪಿತಸ್ಥ ನೌಕರರಾದ ಶ್ರೀ ಜಿ. ಕುಮಾರ್, ಬೆರಳಚ್ಚುಗಾರ, ಇವರನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಕೆಲಸದಿಂದ ವಜಾ ಮಾಡಲಾಗಿದೆ.

2) ತಪ್ಪಿತಸ್ಥ ನೌಕರರು 01.01.2007 ರಿಂದ ಈ ತಹಲ್‌ವರೆವಿಗೂ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವುದನ್ನು ಅನಧಿಕೃತ ಗೈರು ಹಾಜರಿ ಎಂದು ಪರಿಗಣಿಸಿ ದಿನಾಂಕ:01.01.2007 ರಿಂದ ಆರ್ಥಿಕ ಸವಲತ್ತುಗಳ ಜೊತೆಗೆ ಯಾವುದೇ ಸವಲತ್ತುಗಳನ್ನು ಪಡೆಯಲು ಅರ್ಹರಾಗಿಲ್ಲವೆಂದು ಆದೇಶಿಸಲಾಗಿದೆ.

**ಎಂ.ಜಿ. ಸುಧೀಂದ್ರ**
ಜಿಲ್ಲಾ ನ್ಯಾಯಾಧೀಶರು ಮತ್ತು ಶಿಸ್ತು ಪ್ರಾಧಿಕಾರ
ಅಧಿಕಾರಿಗಳು, ಮಂಡ್ಯ.

**ಜಿಲ್ಲಾ ನ್ಯಾಯಾಧೀಶರು ಮತ್ತು ಶಿಸ್ತು ಪ್ರಾಧಿಕಾರ ಅಧಿಕಾರಿ, ಮಂಡ್ಯ ಇಲಾಖಾ ತನಿಖೆ ನಂ.10/2007**

**ಕರ್ನಾಟಕ ಸರ್ಕಾರ ವಿರುದ್ಧ** ಶ್ರೀ ಜಿ. ಕುಮಾರ್, ಬೆರಳಚ್ಚುಗಾರರು, ಸಿವಿಲ್ ಜಡ್ಜ್ (ಹಿ.ವಿ.) ನ್ಯಾಯಾಲಯ, ಮದ್ದೂರು,
ವಾಸ: ಮನೆ ನಂ.712, ಮೊದಲನೇ ಕ್ರಾಸ್, ಹಳೆ ಅಂಚೆ ಕಛೇರಿ ರಸ್ತೆ, ಗುತ್ತಲು ಕಾಲೋನಿ, ಮಂಡ್ಯ.

**ಅಂತಿಮ ಆದೇಶದ ಪ್ರಕಟಣೆ**

ಶ್ರೀ ಜಿ. ಕುಮಾರ್, ಬೆರಳಚ್ಚುಗಾರರ ವಿರುದ್ಧ ಇಲಾಖಾ ತನಿಖೆಯಲ್ಲಿ ಆರೋಪಿಸಲಾಗಿರುವ ಎಲ್ಲಾ ಆರೋಪಗಳು ಸಾಬೀತಾಗಿರುವುದರಿಂದ ಜಿಲ್ಲಾ ನ್ಯಾಯಾಧೀಶರು ಮತ್ತು ಶಿಸ್ತು ಪ್ರಾಧಿಕಾರ ಅಧಿಕಾರಿ, ಮಂಡ್ಯ ರವರು ದಿನಾಂಕ:19.12.2008ರಂದು ತೀವ್ರ ದಂಡನೀಯ ಕ್ರಮ ಜರುಗಿಸಿ ಅಂತಿಮ ಆದೇಶವನ್ನು ಈ ಕೆಳಕಂಡಂತೆ ಮಾಡಿರುತ್ತಾರೆ.

"ತಪ್ಪಿತಸ್ಥ ನೌಕರರಾದ ಶ್ರೀ ಜಿ. ಕುಮಾರ್, ಬೆರಳಚ್ಚುಗಾರ, ಇವರನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಕೆಲಸದಿಂದ ವಜಾ ಮಾಡಲಾಗಿದೆ".

**ಎಂ.ಜಿ. ಸುಧೀಂದ್ರ**
ಪಿ.ಆರ್.52
ಜಿಲ್ಲಾ ನ್ಯಾಯಾಧೀಶರು ಮತ್ತು ಶಿಸ್ತು ಪ್ರಾಧಿಕಾರ
ಅಧಿಕಾರಿಗಳು, ಮಂಡ್ಯ.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು**

**ವಿಷಯ:** ಶ್ರೀ ಬಿ.ಕೆ. ರಾಘವೇಂದ್ರ, ಶುಶ್ರೂಷಕರು, ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು, ಇವರ ಅನಧಿಕೃತ ಗೈರು ಹಾಜರಿ ಆರೋಪದ ಬಗ್ಗೆ ಇಲಾಖಾ ವಿಚಾರಣೆ–ಅಂತಿಮ ಆದೇಶ.

**ಓದಲಾಗಿದೆ:**1) ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂಖ್ಯೆ: ಡಿಪಿಎನ್:(1) ಸಿಆರ್ 49:04–05, ದಿನಾಂಕ:01.07.2005.

2) ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ: ಡಿಪಿಎನ್:(1)ಸಿಆರ್:49:04–05, ದಿನಾಂಕ:14.09.2005.

3) ವಿಚಾರಣಾ ವರದಿಯ ಸಂ:ವಿಅ:ವಿಚಾರಣೆ:ಎನ್‌ಜಿ:15:05–06, ದಿನಾಂಕ:13.08.2006.

4) ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರದ ಸಂ:ಡಿಪಿಎನ್:(1) ಸಿಆರ್:49:04–05, ದಿನಾಂಕ:10.08.2006.

5) ಪತ್ರಿಕಾ ಪ್ರಕಟಣೆ, ಉದಯವಾಣಿ, ದಿನಾಂಕ:13.09.2008.

ಪ್ರಸ್ತಾವನೆ:

ಶ್ರೀ ಬಿ.ಕೆ. ರಾಘವೇಂದ್ರ, ಶುಶ್ರೂಷಕರು, ಇವರು ಹಿಂದೆ ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ದಿನಾಂಕ:24.01.2004 ರಿಂದ ಇಲ್ಲಿಯವರೆಗೆ ಅನಧಿಕೃತ ಗೈರು ಹಾಜರಿಯಾದ ಆರೋಪದ ಬಗ್ಗೆ ಮೇಲೆ ಓದಲಾದ (1)ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು, ಅದಕ್ಕೆ ಅನುಗುಣವಾಗಿ ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸೇ ಇರುವುದರಿಂದ, ಕಾರಣ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ, ಮೇಲೆ ಓದಲಾದ (2)ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತ ಅಧಿಕಾರಿಗಳು, (ಜಾಗೃತ ಕೋಶ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದು, ಮೇಲೆ ಓದಲಾದ (3)ರಂತೆ ವಿಚಾರಣಾಧಿಕಾರಿಗಳು, ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿರುತ್ತಾರೆ. ಮೇಲೆ ಓದಲಾದ (4)ರಲ್ಲಿನ ಸೂಚನಾ ಪತ್ರದಲ್ಲಿ ವಿಚಾರಣೆ ವರದಿಯ ಪ್ರತಿಯನ್ನು ನೌಕರರಿಗೆ ಜಾರಿಗೊಳಿಸಿದ್ದಕ್ಕನುಗುಣವಾಗಿ, ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸಿರುವುದಿಲ್ಲ. ಆದ ಕಾರಣ ಮೇಲೆ ಓದಲಾದ 5ರಲ್ಲಿ ಪತ್ರಿಕಾ ಪ್ರಕಟಣೆ ನೀಡಲಾಗಿದ್ದರೂ ನೌಕರರು ತಮ್ಮ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ. ಆದಕಾರಣ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿ ನಿರ್ಣಯದ ವರದಿಯನ್ನು ಪರಿಶೀಲಿಸಿದ ತರುವಾಯ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್:(1): ಸಿಆರ್:49:04–05, ಬೆಂಗಳೂರು, ದಿನಾಂಕ:26ನೇ ಡಿಸೆಂಬರ್, 2008**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಡಾ: ಉಷಾ ವಾಸುನ್‌ಕರ್, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರು; ಆದ ನಾನು ಶ್ರೀ ಬಿ.ಕೆ. ರಾಘವೇಂದ್ರ, ಶುಶ್ರೂಷಕರು, ಇವರ ದಿನಾಂಕ:24.01.2004 ರಿಂದ ಇಲ್ಲಿಯವರೆಗಿನ ಅನಧಿಕೃತ ಗೈರು ಹಾಜರಿಯ ಆರೋಪಕ್ಕೆ ದಂಡನೆಯಾಗಿ ಸದರಿ ನಿಯಮ 8(viii) ಅನ್ವಯ ಈ ಆದೇಶ ಜಾರಿ ಮಾಡಿದ ದಿನಾಂಕದಿಂದ ಅನ್ವಯವಾಗುವಂತೆ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿದ್ದೇನೆ.

**ಡಾ: ಉಷಾ ವಾಸುನ್‌ಕರ್**
ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ
ಕಲ್ಯಾಣ ಸೇವೆಗಳು, ಬೆಂಗಳೂರು–09.

ಪಿ.ಆರ್.55

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003-Clarification under Section 59(4) regarding the rate of tax applicable on ‘parts of rice mill machinery’.

**Ref:** Application Dated:23.10.2008 of M/s. Milltec Machinery Pvt Ltd., No.51-A, 1st Phase, KIADB, Industrial Area, Bommasandra, Bangalore-560099.

In its application cited above, M/s. Milltec Machinery Pvt Ltd., No.51-A, 1st Phase, KIADB, Industrial Area, Bommasandra, Bangalore-560099 has sought clarification regarding the rate of tax applicable on ‘parts of rice mill machinery’.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR.187/08-09, Dated:23rd December, 2008**

It is hereby clarified that ‘parts of rice mill machinery’ are taxable at 12.5% under Section 4(1) (b) of the KVAT Act, 2003.

**B.A. HARISH GOWDA**
Commissioner of Commercial Taxes,
(Karnataka), Bangalore.

PR-54

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಗದಗ ಜಿಲ್ಲೆ, ಗದಗ**

**ಸಂಖ್ಯೆ: ಕಾಅಗ/ಕಾನಪ/ಎಫ್–112/08, ದಿನಾಂಕ:29ನೇ ಡಿಸೆಂಬರ್, 2008**

**ಅರ್ಜಿದಾರರು:**

1) ಶ್ರೀಮತಿ ಬೀಬಿಜಾನ್ ಮುನಾಫಸಾಬ್ ಬೆಟಗೇರಿ, 35 ವರ್ಷ, ಎಸ್.ಎಸ್. ಪಾಟೀಲ ನಗರ, ಮುಂಡರಗಿ.
2) ಮರದನಲಿ ತಂದೆ: ಮುನಾಫಸಾಬ್ ಬೆಟಗೇರಿ, 17 ವರ್ಷ.
3) ಕಾಶೀಮ್‌ಸಾಬ ತಂದೆ: ಮುನಾಫಸಾಬ್ ಬೆಟಗೇರಿ, 16 ವರ್ಷ.
4) ಮೆಹಬೂಬಲಿ ತಂದೆ: ಮುನಾಫಸಾಬ್ ಬೆಟಗೇರಿ, 15 ವರ್ಷ.
5) ನಿಶಾರ್‌ಬೇಗಂ ತಂದೆ: ಮುನಾಫಸಾಬ್ ಬೆಟಗೇರಿ, 10 ವರ್ಷ.
6) ಹೀನಾಬೇಗಂ, ತಂದೆ: ಮುನಾಫಸಾಬ್ ಬೆಟಗೇರಿ, 8 ವರ್ಷ.
7) ಬಸೀರಾ ತಂದೆ: ಮುನಾಫಸಾಬ್ ಬೆಟಗೇರಿ, 5 ವರ್ಷ.

**ವಿರುದ್ಧ**

**ಪ್ರತಿವಾದಿಗಳು:**

1) ಬಶೀರಹಮ್ಮದ್ ತಂದೆ: ಅಲ್ಲಾಸಾಬ ತಾಳಿಕೋಟೆ, ನಂದೀಶ್ವರನಗರ, ಕಳಸಾಪುರ ರಸ್ತೆ, ಗದಗ.
2) ದಿ ಡಿವಿಜನಲ್ ಮ್ಯಾನೇಜರ್, ಬಜಾಜ್ ಅಲಿಯಾನ್ಸ್ ಇನ್ಸೂರೆನ್ಸ್ ಕಂ.ಲಿ., ಕಲಬುರ್ಗಿಮೆನಶನ್, ಮುನಿಸಿಪಲ್ ಕಾರ್ಪೋರೇಶನ್ ಎದುರು, ಲ್ಯಾಮಿಂಗ್‌ಟನ್ ರೋಡ್, ಹುಬ್ಬಳ್ಳಿ.

**ಪ್ರಕಟಣೆ**

ಅರ್ಜಿದಾರರಾದ 1) ಶ್ರೀಮತಿ ಬೀಬಿಜಾನ್ ಮುನಾಫಸಾಬ್ ಬೆಟಗೇರಿ ಹಾಗೂ ಇತರೆ 6 ಜನ ಅರ್ಜಿದಾರರು ಇವರು, ತಾವು ಮೃತ ಮುನಾಫಸಾಬ್ ಬೆಟಗೇರಿ ಇವರ ಹೆಂಡತಿ ಮತ್ತು ಮಕ್ಕಳು ಎಂದೂ, ಅವರ ಮರಣದಿಂದ ನಷ್ಟಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮುನಾಫಸಾಬ್ ದಾವಲಸಾಬ್ ಬೆಟಗೇರಿ ಇವರು ಒಂದನೇ ಪ್ರತಿವಾದಿಗಳಾದ ಬಶೀರಹಮ್ಮದ್ ತಂದೆ: ಅಲ್ಲಾಸಾಬ ತಾಳಿಕೋಟೆ ಇವರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದು ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಎಂ.ಬಿ. ಅನ್ಸಾರಿ
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಕಾಯ್ದೆಯಡಿ ಆಯುಕ್ತರು, ಗದಗ ಜಿಲ್ಲೆ, ಗದಗ.

ಪಿ.ಆರ್.53

**ಅಧಿಕೃತ ಅಧಿಕಾರಿ ಹಾಗೂ ಉಪಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಇವರ ನ್ಯಾಯಾಲಯ**

**ಅಂತಿಮ ಮುಟ್ಟುಗೋಲು ಆದೇಶ**

**ಸಂಖ್ಯೆ:ಎ2/ಅಅಪ್ರ/ಬೀಟೆ/ ಬ.ಹರಾಜು/ಸಿಆರ್/08–09, ದಿನಾಂಕ:5ನೇ ಜನವರಿ, 2009**

**ವಿಷಯ:** ದಿನಾಂಕ:13.01.2008ರಂದು ಚೆನ್ನಪಟ್ಟಣದ ಈದ್ಗಾ ಮೈದಾನದಲ್ಲಿ ಇಲಾಖೆಯ ಪರ ಅಮಾನತ್ತುಪಡಿಸಿಕೊಂಡಿರುವ 21 ಬೀಟೆ ಮರದ ದಿಮ್ಮಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ:** ಕರ್ನಾಟಕ ರಾಜ್ಯ ಪತ್ರ ದಿನಾಂಕ:16.10.2008ರಂದು ಹೊರಡಿಸಿರುವ ಈ ಕಛೇರಿ ಪತ್ರ ಸಂಖ್ಯೆ: ಎ2/ಅಅಪ್ರ/ಬೀಟೆ/ಬ.ಹರಾಜು/ಸಿಆರ್ 07–08, ಬೆಂಗಳೂರು, ದಿನಾಂಕ:15.10.2008.

**ಪ್ರಸ್ತಾವನೆ:**

ರಾಮನಗರ ಜಿಲ್ಲೆ, ಚೆನ್ನಪಟ್ಟಣ ತಾಲ್ಲೂಕು ಚೆನ್ನಪಟ್ಟಣದ ಈದ್ಗಾ ಮೈದಾನದಲ್ಲಿ ದಿನಾಂಕ:13.01.2008ರಂದು ಈ ವಿಭಾಗದ ವಲಯ ಅರಣ್ಯಾಧಿಕಾರಿಗಳು ವಾರಸುದಾರರಿಲ್ಲದ 21 ಬೀಟೆ ಮರದ ದಿಮ್ಮಿಗಳನ್ನು ಕರ್ನಾಟಕ ಅರಣ್ಯ ಕಾಯ್ದೆ

1963 ಸೆಕ್ಷನ್ 2(7) 62, 71ಎ, 80, 104(ಎ) ರಡಿ ಇಲಾಖೆ ಪರ ವಶಪಡಿಸಿಕೊಂಡಿದ್ದು, ಮೇಲಿನ ಕಾಯ್ದೆಗಳಡಿ ವಿಧಿವಿಧಾನ ಜರುಗಿಸಲು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ನ್ಯಾಯಾಲಯದಲ್ಲಿ ಹಾಜರುಪಡಿಸಿರುತ್ತಾರೆ. ನಂತರ ತನಿಖಾ ವರದಿ ಸಲ್ಲಿಸಿ ದಿಮ್ಮಿಗಳಿಗೆ ಯಾರೂ ವಾರಸುದಾರರಿರುವುದಿಲ್ಲ ಎಂದು ತಿಳಿಸಿರುತ್ತಾರೆ. ಮುಂದುವರೆದು, ಈ ಕಛೇರಿಯಿಂದ ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ 71ಎ ಪ್ರಕಾರ ಪ್ರಕರಣವನ್ನು ಜರುಗಿಸಿ ಸದರಿ ಬೀಟೆ ಮರದ ದಿಮ್ಮಿಗಳ ವಾರಸತ್ವ ಹೊಂದಿರುವವರು 15 ದಿನಗಳೊಳಗಾಗಿ ತಮ್ಮ ದಾಖಲೆಗಳೊಂದಿಗೆ ಹಾಜರಾಗಲು ಸೂಚಿಸಿ ಆದೇಶ ಹೊರಡಿಸಲಾಗಿತ್ತು. ಹಾಗೂ ನಿಗದಿಪಡಿಸಿದ ದಿನಾಂಕದೊಳಗಾಗಿ ಅಹವಾಲು ಇಲ್ಲವಾದಲ್ಲಿ ಸದರಿ 21 ಬೀಟೆ ಮರದ ದಿಮ್ಮಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಹರಾಜು ಹಾಕಲಾಗುವುದೆಂದು ಸಹ ತಿಳಿಸಲಾಗಿತ್ತು.

ಮೇಲ್ಕಂಡ ಪ್ರಕಟಣೆಯು ಕರ್ನಾಟಕ ರಾಜ್ಯಪತ್ರದಲ್ಲಿ ದಿನಾಂಕ;15.10.2008ರಂದು ಪ್ರಕಟವಾಗಿ $2^1/_2$ ತಿಂಗಳು ಕಳೆದರೂ ಸಹ ಯಾರೂ ಅಹವಾಲು ಮಂಡಿಸದಿರುವುದರಿಂದ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಆದ ನನಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ 71 'ಎ' ರಿಂದ 'ಜಿ' ವರೆಗೆ ಪ್ರದತ್ತವಾಗಿರುವ ಅಧಿಕಾರದ ಮೇರೆಗೆ ದಿನಾಂಕ:13.01.2008ರಂದು ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರು ಈದ್ಗಾ ಮೈದಾನ ಚೆನ್ನಪಟ್ಟಣದಲ್ಲಿ ವಾರಸುದಾರರಿಲ್ಲದೆ ಬಿದ್ದಿದ್ದ 21 ಬೀಟೆ ಮರದ ತುಂಡುಗಳನ್ನು ನನ್ನ ಮುಂದೆ ಹಾಜರುಪಡಿಸಿರುತ್ತಾರೆ. ಈ 21 ಬೀಟೆ ಮರದ ದಿಮ್ಮಿಗಳ ಬಗ್ಗೆ ಕರ್ನಾಟಕ ಅರಣ್ಯ ಕಾಯ್ದೆ 1963ರ ಕಲಂ 71ಎ ಯಿಂದ ಜಿ ವರೆಗಿನ ವಿದಿವಿಧಾನಗಳನ್ನು ಜರುಗಿಸಿ ಈ ಮೂಲಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. ಈ ಆದೇಶವನ್ನು ದಿನಾಂಕ:05.01.2009ರಂದು ಈ ನ್ಯಾಯಾಲಯದಲ್ಲಿ ಮೊಹರು ಹಾಗೂ ಸಹಿಯೊಂದಿಗೆ ಬಿಡುಗಡೆ ಮಾಡಲಾಗಿದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಪಿ.ಆರ್.72 ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಉಪವಿಭಾಗ–1, ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು–ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ/ಸಿಆರ್.34/2008ಎಫ್, ದಿನಾಂಕ:5ನೇ ಜನವರಿ, 2009**

| ಅರ್ಜಿದಾರರು: | | ಪ್ರತಿವಾದಿಗಳು: |
|---|---|---|
| 1) ಎಲ್ಲಪ್ಪ ಪ್ರಾಯ, 55 ವರ್ಷ ಬಿನ್ ದಿ: ಕುಕ್ಕಮತಿಯ.<br>2) ಶ್ರೀಮತಿ ಸುಂದರಿ ಕೋಂ ಎಲ್ಲಪ್ಪ, ಪ್ರಾಯ 40 ವರ್ಷ.<br>ವಾಸ: ಅಲಂಗಾರುಮನೆ, ದಿಡುಪೆ, ಮಲವಂತಿಗೆ ಗ್ರಾಮ, ಬೆಳ್ಗಂಗಡಿ ತಾಲ್ಲೂಕು. | ವಿರುದ್ಧ | 1) ತೋಮಸ್ ಡಿಸೋಜ,<br>ಪ್ರಾಯ:54 ವರ್ಷ, ಬಿನ್ ಪೆದ್ರು ಡಿಸೋಜ, ಪಕ್ಕಿದಕಳ, ಮೇಲಂ ತಬೆಟ್ಟು, ಗ್ರಾಮ, ಬೆಳ್ತಂಗಡಿ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ. |

**ಅಧಿಸೂಚನೆ**

ಅರ್ಜಿದಾರನಾದ/ ಅರ್ಜಿದಾರಳಾದ ಶ್ರೀಮತಿ/ಶ್ರೀ ಎಲ್ಲಪ್ಪ ಬಿನ್ ದಿ: ಕುಕ್ಕಮಲೆಯ ಇವರು ತಮ್ಮ ಮಗನಾದ ಶ್ರೀ ದಿವಂಗತ ಚಂದ್ರ S/o ಎಲ್ಲಪ್ಪ ಇವರು 1ನೇ ಪ್ರತಿವಾದಿಗಳಾದ ಶ್ರೀ ತೋಮಸ್ ಡಿಸೋಜ ಬಿನ್ ಪೆದ್ರುಡಿಸೋಜ, ಬೆಳ್ತಂಗಡಿ ಇವರ ಫ್ಯಾಕ್ಟರಿಯಲ್ಲಿ ಕೂಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ:18.05.2004 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಡಿ.ಜಿ. ನಾಗೇಶ**
ಪಿ.ಆರ್.73 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ದಕ್ಷಿಣ ಕನ್ನಡ ಉಪವಿಭಾಗ–1, ಮಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡುವಳಿಗಳು**

**ವಿಷಯ:** ಹಾಸನ ಜಿಲ್ಲೆ, ಅರಸೀಕೆರೆ ತಾಲ್ಲೂಕು, ರಂಗಪುರ ಕಾವಲ್ ಗ್ರಾಮದ ಸರ್ವೆ ನಂ.01 ರಲ್ಲಿ 7.00 ಎಕರೆಗೆ ಹಸಿರು ಶಿಲೆಗಾಗಿ ಮೆ: ಶ್ರೀ ಶೈಲ ಗ್ರಾನೈಟ್ಸ್ ಅಂಡ್ ಮಾರ್ಬಲ್ಸ್‌ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 645ರ ಗುತ್ತಿಗೆಯನ್ನು ಪುನರ್ ಸ್ಥಾಪಿಸಿರುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಪತ್ರಸಂಖ್ಯೆ: ಸಿ.ಐ.33 ಎಂ.ಎಂ.ಎನ್. 2008, ಬೆಂಗಳೂರು, ದಿನಾಂಕ:20.05.2008.

**ಪ್ರಸ್ತಾವನೆ:**

ಹಾಸನ ಜಿಲ್ಲೆ, ಅರಸೀಕೆರೆ ತಾಲ್ಲೂಕು, ರಂಗಪುರ ಕಾವಲ್ ಗ್ರಾಮದ ಸರ್ವೆ ನಂ.01ರಲ್ಲಿ 7.00 ಎಕರೆ ವಿಸ್ತೀರ್ಣದಲ್ಲಿ ಹಸಿರು ಅಲಂಕಾರಿಕ ಶಿಲೆಗಾಗಿ ಕಲ್ಲುಗಣಿ ಗುತ್ತಿಗೆ ಸಂಖ್ಯೆ: 645ರ ಗುತ್ತಿಗೆಯನ್ನು ಮೆ: ಶ್ರೀ ಶೈಲ ಗ್ರಾನೈಟ್ಸ್ ಅಂಡ್ ಮಾರ್ಬಲ್ಸ್ ರವರ ಹೆಸರಿನಲ್ಲಿ ದಿನಾಂಕ:12.04.1994 ರಿಂದ 10 ವರ್ಷಗಳಿಗಾಗಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಗುತ್ತಿಗೆದಾರರು ಗುತ್ತಿಗೆ ಮೇಲಿನ ಬಾಕಿಯನ್ನು ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿದ ಕಾರಣ ದಿನಾಂಕ:16.11.2007 ರಿಂದ ಜಾರಿಗೆ ಬರುವಂತೆ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದ ಅಡಿಯಲ್ಲಿ ಗುತ್ತಿಗೆಯನ್ನು ರದ್ದುಗೊಳಿಸಲಾಗಿತ್ತು.

ಅದರಂತೆ ಗುತ್ತಿಗೆದಾರರು ಪರಿಷ್ಕರಣ ಅರ್ಜಿಯನ್ನು ನಿಯಮ 53(2)ರ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರಂತೆ ಸರ್ಕಾರಕ್ಕೆ ಸಲ್ಲಿಸಿದ್ದು ಅದರಂತೆ ಸರ್ಕಾರವು ಉಲ್ಲೇಖಿತ ಪತ್ರದಲ್ಲಿ ಅರ್ಜಿಯನ್ನು ಪರಿಗಣಿಸಿ ಗುತ್ತಿಗೆಯನ್ನು ಪುನರ್ ಸ್ಥಾಪಿಸಲು ಆದೇಶಿಸಿರುವುದರಿಂದ ಈ ಆದೇಶ ಮಾಡಲಾಗಿದೆ.

**ಆದೇಶ**

**ಸಂಖ್ಯೆ: ಗಭೂಇ:ಡಿಸಿಬಿ:ಕಗಗು 645:2008–09/12319, ದಿನಾಂಕ:6ನೇ ಜನವರಿ, 2009**

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಸರ್ಕಾರದ ಪತ್ರದ ದಿನಾಂಕ:20.05.2008ರಲ್ಲಿ ಆದೇಶಿಸಿರುವಂತೆ ಹಾಸನ ಜಿಲ್ಲೆ, ಅರಸೀಕೆರೆ ತಾಲ್ಲೂಕು, ರಂಗಪುರ ಕಾವಲ್ ಗ್ರಾಮದ ಸರ್ವೆ ನಂ.01ರಲ್ಲಿ 7.00 ಎಕರೆ ವಿಸ್ತೀರ್ಣದಲ್ಲಿ ಹಸಿರು ಶಿಲೆಗಾಗಿ ಮೆ: ಶ್ರೀ ಶೈಲ ಗ್ರಾನೈಟ್ಸ್ ಅಂಡ್ ಮಾರ್ಬಲ್ಸ್ ರವರ ಹೆಸರಿನಲ್ಲಿ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 645ರ ಗುತ್ತಿಗೆಯನ್ನು ರದ್ದುಗೊಳಿಸಿದ ದಿನಾಂಕ:20.05.2008 ರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮಗಳ ಷರತ್ತಿಗೆ ಒಳಪಡಿಸಿ ಪುನರ್ ಸ್ಥಾಪಿಸಲಾಗಿದೆ. ಕಲ್ಲು ಗಣಿ ಗುತ್ತಿಗೆ ಅವಧಿ ಹಾಗೂ ಇನ್ನಿತರ ಷರತ್ತಿನಂತೆ ಗುತ್ತಿಗೆಯನ್ನು ಪುನರ್ ಸ್ಥಾಪಿಸಲಾಗಿದೆ.

ನಿರ್ದೇಶಕರು,
ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು.

ಪಿ.ಆರ್.75

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಕಾಅಗ/ಕಾನಪ/ಎಫ್–111/08, ದಿನಾಂಕ:29ನೇ ಡಿಸೆಂಬರ್, 2008**

**ಅರ್ಜಿದಾರರು:**

1) ಹನುಮಪ್ಪ ತಂದೆ: ಗೋನೆಪ್ಪ ಕಿರಿಕಿರಿ, 50 ವರ್ಷ, ಸಾ: ಕದಾಂಪುರ, ತಾ:ಮುಂಡರಗಿ ಜಿಲ್ಲೆ: ಗದಗ.

2) ಗಂಗವ್ವ ಕೋಂ ಹನಮಪ್ಪ ಕಿರಿಕಿರಿ, 45 ವರ್ಷ, ಸಾ: ಕದಾಂಪುರ, ತಾ:ಮುಂಡರಗಿ, ಜಿಲ್ಲೆ:ಗದಗ.

ವಿರುದ್ಧ

**ಪ್ರತಿವಾದಿಗಳು:**

1) ಮೃತ್ಯುಂಜಯ ತಂದೆ: ಚನ್ನವೀರಯ್ಯ ಸುರಂಗಿಮಠ, ಸಾ: ಸಾಸಲವಾಡ, ತಾ:ಶಿರಹಟ್ಟಿ, ಜಿ:ಗದಗ.

2) ಡಿವಿಜನಲ್ ಮ್ಯಾನೇಜರ್, ನ್ಯಾಶನಲ್ ಇನ್ಸೂರೆನ್ಸ್ ಕಂ.ಲಿ., ಸುಜಾತ ಕಾಂಪ್ಲೆಕ್ಸ್, ಪಿ.ಬಿ.ರೋಡ್, ಹುಬ್ಬಳ್ಳಿ.

**ಪ್ರಕಟಣೆ**

ಅರ್ಜಿದಾರರಾದ ಶ್ರೀ ಹನುಮಪ್ಪ ತಂದೆ: ಗೋನೆಪ್ಪ ಕಿರಿಕಿರಿ, 2) ಶ್ರೀಮತಿ ಗಂಗವ್ವ ಕೋಂ ಹನಮಪ್ಪ ಕಿರಿಕಿರಿ, ಸಾ:ಕದಾಂಪುರ, ತಾ: ಮುಂಡರಗಿ, ಜಿಲ್ಲಾ: ಗದಗ ಇವರು ತಾವು ಮೃತ ಈರಪ್ಪ ತಂದೆ: ಹನಮಪ್ಪ ಕಿರಿಕಿರಿ ಇವರ ತಂದೆ ಮತ್ತು ತಾಯಿ ಎಂದೂ, ಅವರ ಮರಣದಿಂದ ನಷ್ಟಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಈರಪ್ಪ ತಂದೆ: ಹನಮಪ್ಪ ಕಿರಿಕಿರಿ ಇವರು ಒಂದನೇ ಪ್ರತಿವಾದಿಗಳಾದ ಮೃತ್ಯುಂಜಯ ತಂದೆ: ಚನ್ನವೀರಯ್ಯ ಸುರಂಗಿಮಠ ಇವರಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎಂ.ಬಿ. ಅನ್ಸಾರಿ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಕಾಯ್ದೆಯಡಿ ಆಯುಕ್ತರು, ಗದಗ ಜಿಲ್ಲೆ, ಗದಗ.

ಪಿ.ಆರ್.77

## ಕಾರ್ಮಿಕ ಇಲಾಖೆ

### ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಪ್ರ.ಸಂಖ್ಯೆ: ಕಾಅದಾ:ಕಾನಪ:ಸಿಆರ್–244/08, ದಿನಾಂಕ:6ನೇ ಜನವರಿ, 2009**

**ಅರ್ಜಿದಾರರು:**

1) ಶ್ರೀಮತಿ ಮೊಹಿಧೀನ್ ಬಿ. ಕೋಂ ಲೇ:ದಾದಾಪೀರ್, 40 ವರ್ಷ.
2) ಸಿಖಂದರ್ ಡಿ. ಬಿನ್ ಲೇ: ದಾದಾಪೀರ್, 20 ವರ್ಷ.
3) ಶಬಾನ ಡಿ. ಬಿನ್ ಲೇ:ದಾದಾಪೀರ್, 18 ವರ್ಷ.
4) ಅಸ್ಮಬಾನು ಡಿ. ಬಿನ್ ಲೇ:ದಾದಾಪೀರ್, 16 ವರ್ಷ.
ಸೈಯದ್ ಪೀರ್ ಬಡಾವಣೆ, ನಿಟ್ಟವಳ್ಳಿ, ನ್ಯೂ ಎಕ್ಸ್‌ಟೆನ್‌ಷನ್, ದಾವಣಗೆರೆ.

ವಿರುದ್ಧ

**ಪ್ರತಿವಾದಿಗಳು:**

1) ಖಲಂದರ್ ಬಿನ್ ದಾದಾಪೀರ್, ಲಾರಿ ಮಾಲೀಕರು ನಂ.ಕೆಎ–17–ಸಿ–5556, ಡೋರ್ ನಂ.1–321 ಎ–ಬ್ಲಾಕ್, ಎಸ್.ಎಸ್. ಮಲ್ಲಿಕಾರ್ಜುನ ನಗರ, ಶಿವನಗರ ರಸ್ತೆ, ದಾವಣಗೆರೆ.
2) ದಿ ಮ್ಯಾನೇಜರ್ ಬಜಾಜ್ ಅಲೈಯನ್ಸ್ ಜನರಲ್ ಇನ್ಸೂರೆನ್ಸ್ ಕಂ.ಲಿ., 4ನೇ ಮಹಡಿ, ಕಲಬುರ್ಗಿ ಮ್ಯಾನ್ಸ್‌ಷನ್, ಮುನ್ಸಿಪಾಲ್ ಕಾರ್ಪೋರೇಷನ್ ಲ್ಯಾಮಿಂಗ್ ಟನ್ ರಸ್ತೆ, ಹುಬ್ಬಳ್ಳಿ.

**ಪ್ರಕಟಣೆ**

ಶ್ರೀಮತಿ ಮೊಹಿದೀನ್, ಸಿಖಂದರ್ ಡಿ, ಶಬಾನ ಡಿ, ಅಸ್ಮಬಾನು ಡಿ ಇವರುಗಳಾದ ನಾವು ಮೃತ ದಾದಾಪೀರ್ ಇವರ ಹೆಂಡತಿ ಮತ್ತು ಮಕ್ಕಳು ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ದಾದಾಪೀರ್ ರವರು ಒಂದನೇ ಪ್ರತಿವಾದಿಗಳಾದ ಖಲಂದರ್ ಬಿನ್ ದಾದಾಪೀರ್ ಇವರ ಲಾರಿ ಯಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿರುವರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎಸ್.ಸಿ. ರಾಮಚಂದ್ರ**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು,
ಕಾರ್ಮಿಕ ನಷ್ಟ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.78

## ಕಾರ್ಮಿಕ ಇಲಾಖೆ

### ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಪ್ರ.ಸಂಖ್ಯೆ: ಕಾಅದಾ:ಕಾನಪ:ಸಿಆರ್–245/08, ದಿನಾಂಕ:6ನೇ ಜನವರಿ, 2009**

**ಅರ್ಜಿದಾರರು:**

1) ಸಿದ್ದೀಕ್ @ ಮೊಹ್ಮದ್ ಸಿದ್ದೀಕ್ ಬಿನ್ ಮಿನ್ನಾಜ್‌ಖಾನ್, 6 ವರ್ಷ.
2) ಸಮಬಾನು ಬಿನ್ ಸಿದ್ದೀಕ್, 16 ವರ್ಷ
3) ಸಲ್ಮಾನ್‌ಬಾನು ಬಿನ್ ಸಿದ್ದೀಕ್, 14 ವರ್ಷ
4) ತಬ್ರೀಜ್ ಬಾನು ಬಿನ್ ಸಿದ್ದೀಕ್, 12 ವರ್ಷ
5) ಅಲ್ಡಿಯಾ ಬಿನ್ ಸಿದ್ದೀಕ್, 10 ವರ್ಷ
ಕರ್ಷ್‌ಮರ್ ಜಿಲ್ಲೆ, ಪ್ರಥಾಪ್‌ಘಡ್, ಉತ್ತರಪ್ರದೇಶ ರಾಜ್ಯ.

ವಿರುದ್ಧ

**ಪ್ರತಿವಾದಿಗಳು:**

1) ವೀರಾಲ ರೋಡ್‌ಲೈನ್ಸ್ ಗೂಡ್ಸ್ ಟ್ರಕ್ಸ್ ಮಾಲೀಕರು, ನಂ.ಜಿ.ಜೆ.16–ವಿ–5959, ಜಿ.ಐ.ಡಿ..ಸಿ.ಪೊಲೀಸ್ ಸ್ಟೇಷನ್ ಎದುರು, ಜಿಐಡಿಸಿ ಅಂಕಲೇಶ್ವರ ಜಿಲ್ಲೆ, ಜೂಚ್ ಗುಜರಾತ್ ರಾಜ್ಯ.
2) ದಿ ಡಿವಿಜನಲ್ ಮ್ಯಾನೇಜರ್ ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ., ಮೆಲಗಿರಿ ಪ್ಲಾಜಾ ಜೆ.ಜೆ.ಎಂ.ಕಾಲೇಜ್ ಎದುರು, ಪಿ.ಜೆ. ಬಡಾವಣೆ, ದಾವಣಗೆರೆ.

**ಪ್ರಕಟಣೆ**

ಶ್ರೀ:ಶ್ರೀಮತಿ ಸಿದ್ದೀಕ್, ಸಮಬಾನು, ಸಲ್ಮಾನ್‌ಬಾನು, ತಬ್ರಿಜ್‌ಬಾನು, ಅಲ್ಡಿಯಾ ಇವರುಗಳಾದ ನಾವು ಮೃತ ಮೊಹ್ಮದ್‌ಶರೀಫ್ ಇವರ ತಂದೆ ಮತ್ತು ತಮ್ಮ, ತಂಗಿಯರು ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮೊಹ್ಮದ್‌ಶರೀಫ್ ರವರು ಒಂದನೇ ಪ್ರತಿವಾದಿಗಳಾದ ವೀರಾಲ

ರೋಡ್‌ಲೈನ್ಸ್ ಇವರ ಗೂಡ್ಸ್‌ಟ್ರಕ್ ನಲ್ಲಿ ಚಾಲಕನಾಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿರುವರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಎಂ.ಸಿ. ರಾಮಚಂದ್ರ
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು,
ಕಾರ್ಮಿಕ ನಷ್ಟ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.79

## ಕಾರ್ಮಿಕ ಇಲಾಖೆ

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಪ್ರ.ಸಂಖ್ಯೆ: ಕಾಅದಾ:ಕಾನಪ:ಸಿಆರ್–246/08, ದಿನಾಂಕ:6ನೇ ಜನವರಿ, 2009**

**ಅರ್ಜಿದಾರರು:**

1) ಸಭೀರ್ @ ಸಬಿತಾಅಲಿ ಬಿನ್ ಮುನಿರ್‌ಖಾನ್ ಮತ್ತಿತರೆ 6 ಜನರು.
ಕರ್ಷ್‌ಮರ್ ಜಿಲ್ಲೆ, ಪ್ರಥಾಪ್‌ಘಡ್, ಉತ್ತರಪ್ರದೇಶ ರಾಜ್ಯ.

**ವಿರುದ್ಧ**

**ಪ್ರತಿವಾದಿಗಳು:**

1) ವೀರಾಲ ರೋಡ್‌ಲೈನ್ಸ್ ಗೂಡ್ಸ್ ಟ್ರಕ್ಸ್ ಮಾಲೀಕರು, ನಂ.ಜಿ.ಜೆ.16–ವಿ–5959, ಜಿ.ಐ.ಡಿ..ಸಿ.ಪೊಲೀಸ್ ಸ್ಟೇಷನ್ ಎದುರು, ಜಿಐಡಿಸಿ ಅಂಕಲೇಶ್ವರ ಜಿಲ್ಲೆ, ಜೂಚ್ ಗುಜರಾತ್ ರಾಜ್ಯ.

2) ದಿ ಡಿವಿಜನಲ್ ಮ್ಯಾನೇಜರ್ ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ., ಮೆಲಗಿರಿ ಪ್ಲಾಜಾ ಜೆ.ಜೆ.ಎಂ.ಕಾಲೇಜ್ ಎದುರು, ಪಿ.ಜೆ. ಬಡಾವಣೆ, ದಾವಣಗೆರೆ.

**ಪ್ರಕಟಣೆ**

ಶ್ರೀ:ಶ್ರೀಮತಿ ಸಭೀರ್, ಸಿಜಿದಾಬೇಗಮ್, ಅಫ್ರೋಜ್, ಶ್ರೀಜಾನ್, ದಿಲ್‌ಸಾದ್‌ನೌಷದ್, ಅಮಿನ್‌ಬಾನು ಇವರುಗಳಾದ ನಾವು ಮೃತ ಸಿನ್‌ಲೆಜಾರ್‌ಖಾನ್ ಇವರ ತಂದೆ, ತಾಯಿ ಮತ್ತು ತಮ್ಮ, ತಂಗಿಯರು ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಸಿನ್‌ಲೆಜಾರ್‌ಖಾನ್ ರವರು ಒಂದನೇ ಪ್ರತಿವಾದಿಗಳಾದ ವೀರಾಲ ರೋಡ್‌ಲೈನ್ಸ್ ಇವರ ಗೂಡ್ಸ್‌ಟ್ರಕ್ ನಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿರುವರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಎಂ.ಸಿ. ರಾಮಚಂದ್ರ
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು,
ಕಾರ್ಮಿಕ ನಷ್ಟ ಪರಿಹಾರ, ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.80

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003

**Sub:** KVAT Act, 2003-Clarification under Section 59(4) regarding the rate of tax applicable on 'transfer of property in goods involved in the execution of works contract of powder coating'.

**Ref:** Application Dated:13.08.2008 of Smt. Mhadevamma, Proprietrix, M/s. M.K.S. Industries, No.31, Ganapathinagar, Byatarayanapura, New Lay-out, Mysore Road, Bangalore-560026.

In its application cited above, Smt. Mhadevamma, Proprietrix, M/s. M.K.S. Industries, No.31, Ganapathinagar, Byatarayanapura, New Lay-out, Mysore Road, Bangalore-560026 has sought clarification regarding the rate of tax applicable on 'transfer of property in goods involved in the execution of works contract of powder coating'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR.106/08-09, Dated:11th December, 2008**

It is hereby clarified that 'transfer of property in goods involved in the execution of works contract of powder coating' is taxable at 4% under entry Sl.No.6 of Sixth Schedule to the KVAT Act, 2003.

**B.A. HARISH GOWDA**
Commissioner of Commercial Taxes,
(Karnataka), Bangalore.

PR-86

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ಬೆಂಗಳೂರು ನಗರ ಜಿಲ್ಲೆ–2, ಬೆಂಗಳೂರು ಇವರ ನ್ಯಾಯಾಲಯದಲ್ಲಿ**

**ದಾವಾ ಸಂಖ್ಯೆ: ಡಿಆರ್‌ಬಿ–2/ಎಸ್‌ಯುಆರ್/01/2007–08**

| ಅರ್ಜಿದಾರರು: | | ಪ್ರತಿವಾದಿಗಳು: |
|---|---|---|
| ಅಧ್ಯಕ್ಷರು, ನಾವಲಂ ವಿವಿಧೋದ್ದೇಶ ಸಹಕಾರ ಸಂಘ ನಿಯಮಿತ, ಬಾಲಾಜಿ ಕಾಂಪ್ಲೆಕ್ಸ್, 1ನೇ ಮಹಡಿ, ನಾರಾಯಣ ಪಿಳ್ಳೈ ರಸ್ತೆ, ಬೆಂಗಳೂರು. | ವಿರುದ್ಧ | ಶ್ರೀ ಜಿ. ದಾಮೋದರನ್ ಬಿನ್ ಕೆ.ಗೋವಿಂದರಾಜು, ನಂ.34, 6ನೇ ಮೈನ್, ಬಾಣಸವಾಡಿ ರಸ್ತೆ, ಬೆಂಗಳೂರು–43. |

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 103 (1)ರನ್ವಯ ಸ್ಥಿರಾಸ್ತಿಯನ್ನು ಅಟ್ಯಾಚ್‌ಮೆಂಟ್ ಮಾಡಿರುವ ಬಗ್ಗೆ ನೋಟೀಸು**

ವಾದಿ ಸಹಕಾರ ಸಂಘವು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 69 ರನ್ವಯ ಪ್ರತಿವಾದಿಯ ವಿರುದ್ಧ ಅಧಿಭಾರ ಪ್ರಕರಣವನ್ನು ಸಲ್ಲಿಸಿ ಪ್ರತಿವಾದಿಯಿಂದ ರೂ.28,41,990–00 ಗಳನ್ನು ಸದರಿ ಮೊತ್ತ ವಸೂಲಾಗುವವರೆಗೆ ಶೇಕಡಾ 18ರ ಬಡ್ಡಿಯೊಂದಿಗೆ ವಸೂಲು ಮಾಡಿಕೊಳ್ಳಲು ಆದೇಶ ನೀಡಬೇಕೆಂದು ನ್ಯಾಯಾಲಯವನ್ನು ಕೋರಲಾಗಿದೆ. ವಾದಿ ಸಹಕಾರ ಸಂಘದ ಅಧಿಭಾರ ಅರ್ಜಿಯನ್ನು ಈ ನ್ಯಾಯಾಲಯವು ಸ್ವೀಕರಿಸಿ ನೋಂದಣಿ ಮಾಡಿಕೊಂಡಿದೆ. ನಂತರ ಉಭಯತ್ರರಿಗೂ ದಿನಾಂಕ:27.02.2008 ರಂದು ನೋಟೀಸು ನೀಡಿ ದಿನಾಂಕ:17.04.2008 ರಂದು ಪ್ರಕರಣದ ವಿಚಾರಣೆಗೆ ದಾಖಲಾತಿ ಹಾಗೂ ಸಾಕ್ಷಿಗಳೊಂದಿಗೆ ಹಾಜರಾಗಲು ತಿಳಿಸಿದೆ. ವಾದಿ ಮತ್ತು ಪ್ರತಿವಾದಿಗಳು ಈ ಪ್ರಕರಣದಲ್ಲಿ ವಕೀಲರ ನೇಮಕಾತಿ ಮಾಡಿಕೊಳ್ಳಲು ನ್ಯಾಯಾಲಯವನ್ನು ಕೋರಿದ್ದು, ಅನುಮತಿ ನೀಡಿದೆ. ಅನುಮತಿ ನೀಡಿರುವ ಹಿನ್ನೆಲೆಯಲ್ಲಿ ವಾದಿಯ ಪರವಾಗಿ ಶ್ರೀ ಎನ್.ರಾಮಚಂದ್ರ ಮತ್ತು ಪ್ರತಿವಾದಿಯ ಪರವಾಗಿ ಶ್ರೀ ಜಯಕುಮಾರ್ ಎಸ್.ಪಾಟೀಲ್ ಅಸೋಸಿಯೇಟ್ಸ್, ವಕೀಲರು ಪ್ರತ್ಯೇಕ ವಕಾಲತ್ತು ಸಲ್ಲಿಸಿ ಹಾಜರಾಗಿದ್ದಾರೆ.

2. ವಾದಿ ಸಹಕಾರ ಸಂಘವು ದಿನಾಂಕ:25.07.2008ರಂದು ಕಲಂ 103 ರನ್ವಯ ಪ್ರಮಾಣೀಕರಿಸಿದ ಅರ್ಜಿ ಸಲ್ಲಿಸಿ ಷೆಡ್ಯೂಲ್‌ನಲ್ಲಿ ವಿವರಿಸಿರುವ ಪ್ರತಿವಾದಿಗೆ ಸೇರಿದ ಸ್ಥಿರಾಸ್ತಿಗೆ ಜಪ್ತಿ ಪೂರ್ವ ಆದೇಶ ನೀಡಬೇಕೆಂದು ನ್ಯಾಯಾಲಯವನ್ನು ಕೋರಿದ್ದಾರೆ. ಸದರಿ ಮಧ್ಯಂತರ ಅರ್ಜಿಗೆ ಪೂರಕವಾಗಿ ವಾದಿ ಸಹಕಾರ ಸಂಘವು ಅಧಿಭಾರ ಪ್ರಕರಣದಲ್ಲಿ ವಿವರಿಸಿರುವ ಅಂಶಗಳನ್ನು ಸಂಕ್ಷಿಪ್ತವಾಗಿ ಈ ಕೆಳಗಿನಂತೆ ಗಮನಿಸಲಾಗಿದೆ. ವಾದಿ ಸಹಕಾರ ಸಂಘವು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯನ್ವಯ ನೋಂದಣಿಯಾದ ಸಹಕಾರ ಸಂಘವಾಗಿದೆ. ಪ್ರತಿವಾದಿಯವರು ಅಕ್ಟೋಬರ್ 2003 ರಂದು ನಡೆದ ಮೊದಲನೇ ವಾರ್ಷಿಕ ಮಹಾಸಭೆಯಲ್ಲಿ ವಾದಿ ಸಂಘದ ಅಧ್ಯಕ್ಷರಾಗಿ ಎರಡೂವರೆ ವರ್ಷಗಳ ಅವಧಿಗೆ ಚುನಾಯಿತರಾಗಿದ್ದಾರೆ. ಶ್ರೀ ಎಲ್. ಬಾಲಕುಮಾರ್, ಸಂಘದ ಸದಸ್ಯರು ರೂ.14,26,990–00 ಗಳನ್ನು ದಿನಾಂಕ:03.10.2004 ರಂದು ಸಂಘದಲ್ಲಿ 3

ವರ್ಷಗಳ ಅವಧಿಗೆ 10.5 ರ ಬಡ್ಡಿ ದರದಲ್ಲಿ ನಿಶ್ಚಿತ ಠೇವಣಿ ಇಡಲು ಪಾವತಿಸಿದ್ದಾರೆ. ಇದೇ ರೀತಿ ಶ್ರೀಯುತರ ಮಗಳು ಶ್ರೀಮತಿ ಪದ್ಮಪ್ರಿಯಾ ಇವರು ಕೂಡಾ ದಿನಾಂಕ:29.01.2005 ರಂದು ರೂ.14.15 ಲಕ್ಷಗಳ ಮೊತ್ತವನ್ನು ಚೆಕ್ ಮೂಲಕ ವಾದಿ ಸಹಕಾರ ಸಂಘಕ್ಕೆ ಪಾವತಿಸಿದ್ದು, ಸದರಿ ಮೊತ್ತವನ್ನೂ ಕೂಡಾ ನಿಶ್ಚಿತ ಠೇವಣಿ ಇಡಲು ವಿನಂತಿಸಿದ್ದಾರೆ. ವಾದಿ ಸಹಕಾರ ಸಂಘವು ಇಂಡಿಯನ್ ಬ್ಯಾಂಕ್, ಬೆನ್ಸನ್ ಟೌನ್, ಬೆಂಗಳೂರು ಶಾಖೆಯಲ್ಲಿ ಖಾತೆಯನ್ನು ಹೊಂದಿದೆ. ಅದೇ ಬ್ಯಾಂಕಿನಲ್ಲಿ ಪ್ರತಿವಾದಿಯೂ ಕೂಡಾ ಉಳಿತಾಯ ಖಾತೆಯನ್ನು ಹೊಂದಿರುತ್ತಾರೆ. ಈ ಮೇಲೆ ವಿವರಿಸಿದ ಎರಡೂ ಮೊತ್ತ ರೂ.28,41,990–00 ಗಳನ್ನು ಪ್ರತಿವಾದಿಯು ಬ್ಯಾಂಕಿನಿಂದ ಸಂಘದ ಪರ ಡ್ರಾ ಮಾಡಿ ಸದರಿ ಬ್ಯಾಂಕಿನಲ್ಲಿ ಹೊಂದಿರುವ ತನ್ನ ಖಾತೆಗೆ ಪ್ರತಿವಾದಿ ಜಮಾ ಮಾಡಿಕೊಳ್ಳುವುದರ ಮೂಲಕ ಹಣ ದುರುಪಯೋಗ ಮಾಡಿಕೊಂಡಿರುತ್ತಾರೆ. 2004–05ನೇ ಸಾಲಿನಲ್ಲಿ ಕಲಂ 63 ರನ್ವಯ ಸಂಘದ ಲೆಕ್ಕಪರಿಶೋಧನೆ ನಡೆಸಿದ ಲೆಕ್ಕಪರಿಶೋಧಕರು ಸದರಿ ಅಂಶವನ್ನು ತಮ್ಮ ವರದಿಯಲ್ಲಿ ದೃಢೀಕರಿಸಿದ್ದಾರೆ. ಕಾರಣ ಪ್ರತಿವಾದಿಯು ಸದರಿ ಮೊತ್ತ ರೂ.28,41,990–00 ಗಳನ್ನು ಬಡ್ಡಿಯೊಂದಿಗೆ ವಾದಿ ಸಹಕಾರ ಸಂಘಕ್ಕೆ ಪಾವತಿ ಮಾಡಲು ಹೊಣೆಗಾರರಾಗಿದ್ದಾರೆ. ಷೆಡ್ಯೂಲ್‌ನಲ್ಲಿ ವಿವರಿಸಿರುವ ಪ್ರತಿವಾದಿಗೆ ಸೇರಿದ ಆಸ್ತಿಯನ್ನು ಈ ಮಧ್ಯೆ ಪ್ರತಿವಾದಿಯು ಮಾರಾಟ ಮಾಡುವ ಹುನ್ನಾರ ನಡೆಸಿರುತ್ತಾರೆ. ಷೆಡ್ಯೂಲ್‌ನಲ್ಲಿ ವಿವರಿಸಿರುವ ಆಸ್ತಿಯನ್ನು ಈ ನ್ಯಾಯಾಲಯವು ಅಧಿಭಾರ ಅರ್ಜಿಯನ್ನನುಸರಿಸಿ ನೀಡಬಹುದಾದ ಆದೇಶದನ್ವಯ ಪ್ರತಿವಾದಿಯಿಂದ ಸಂಘಕ್ಕೆ ಬರಬೇಕಾದ ದುರುಪಯೋಗದ ಮೊಬಲಗನ್ನು ವಸೂಲಿ ಮಾಡಲು ಬೇರೆ ರಹಾ ಇರುವುದಿಲ್ಲವೆಂದು ವಿವರಿಸಿ ಷೆಡ್ಯೂಲ್‌ನ ಆಸ್ತಿಗೆ ಕಲಂ 103 ರನ್ವಯ ಜಪ್ತಿ ಪೂರ್ವ ಆದೇಶ ನೀಡಬೇಕೆಂದು ಕೋರಿದೆ. ವಾದಿ ಸಹಕಾರ ಸಂಘದ ಅಧಿಭಾರ ಅರ್ಜಿಯನ್ನು ವಿರೋಧಿಸಿ ಪ್ರತಿವಾದಿಯು ದಿನಾಂಕ:22.09.2008ರಂದು ಆಕ್ಷೇಪಣೆ ಸಲ್ಲಿಸಿದ್ದಾರೆ. ಸದರಿ ಆಕ್ಷೇಪಣೆಯಲ್ಲಿ ವಾದಿ ಸಹಕಾರ ಸಂಘವು ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯೂ ಕೂಡಾ ಆಕ್ಷೇಪಣೆಗಳಲ್ಲಿ ಸಲ್ಲಿಸಿದ್ದಾರೆ. ಆಕ್ಷೇಪಣೆಗಳನ್ನು ಗಮನಿಸಲಾಗಿದೆ. ವಾದಿ ಸಹಕಾರ ಸಂಘವು ಅಧಿಭಾರ ಅರ್ಜಿಯಲ್ಲಿ ಮಾಡಿರುವ ಆರೋಪಗಳನ್ನು ಪ್ರತಿವಾದಿಯು ನಿರಾಕರಿಸಿರುತ್ತಾರೆ. ಕಲಂ 103 ರನ್ವಯ ವಾದಿ ಸಹಕಾರ ಸಂಘವು ಸಲ್ಲಿಸಿರುವ ಅರ್ಜಿಯನ್ನು ವಿರೋಧಿಸಿ ಪ್ರತಿವಾದಿಯು ಸಲ್ಲಿಸಿರುವ ಆಕ್ಷೇಪಣೆಗಳನ್ನು ಗಮನಿಸಲಾಗಿದೆ. ವಾದಿ ಸಹಕಾರ ಸಂಘವು ಅಟ್ಯಾಚ್ ಮಾಡಲು ಕೋರಿರುವ ಆಸ್ತಿಯು ಪ್ರತಿವಾದಿಯ ಸ್ವಯಾರ್ಜಿತ ಆಸ್ತಿಯೆಂದು ಸಾಬೀತು ಮಾಡಲು ವಾದಿ ಸಹಕಾರ ಸಂಘವು ಯಾವುದೇ ದಾಖಲಾತಿಯನ್ನು ಹಾಜರುಪಡಿಸಿರುವುದಿಲ್ಲ. ವಾದಿ ಸಹಕಾರ ಸಂಘವು ಅಟ್ಯಾಚ್ ಮಾಡಲು ನೀಡಿರುವ ಆಸ್ತಿಯು ಅವಿಭಕ್ತ ಕುಟುಂಬಕ್ಕೆ ಸೇರಿದ ಆಸ್ತಿಯಾಗಿದ್ದು, ಸದರಿ ಆಸ್ತಿಯನ್ನು ವಾದಿ ಸಹಕಾರ ಸಂಘವು ಅಟ್ಯಾಚ್ ಮಾಡಲು ಬರುವುದಿಲ್ಲವೆಂದು ವಿವರಿಸಿ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯನ್ನು ತಿರಸ್ಕರಿಸಬೇಕೆಂದು ಕೋರಿದ್ದಾರೆ.

3. ವಾದಿ ಸಹಕಾರ ಸಂಘವು ಕಲಂ 69 ರನ್ವಯ ಸಲ್ಲಿಸಿರುವ ಅಧಿಭಾರ ಅರ್ಜಿ, ಕಲಂ 103 ರನ್ವಯ ಪ್ರಮಾಣೀಕರಿಸಿ ಸಲ್ಲಿಸಿರುವ ಅರ್ಜಿ, ಸದರಿ ಅರ್ಜಿಗಳೊಂದಿಗೆ ವಾದಿ ಸಹಕಾರ ಸಂಘವು ಸಲ್ಲಿಸಿರುವ ದಾಖಲಾತಿಗಳು, ಷೆಡ್ಯೂಲ್ ಆಸ್ತಿಗೆ ಸಂಬಂಧಿಸಿದಂತೆ ವಾದಿ ಸಹಕಾರ ಸಂಘವು ಹಾಜರುಪಡಿಸಿರುವ ಪ್ರಪತ್ರ ನಮೂನೆ 15 ಹಾಗೂ ಪ್ರತಿವಾದಿಯವರು ಸಲ್ಲಿಸಿರುವ ಆಕ್ಷೇಪಣೆ ಹಾಗೂ ಹಾಜರುಪಡಿಸಿರುವ ನ್ಯಾಯಾಲಯದ ಆದೇಶದ ಜೆರಾಕ್ಸ್ ಪ್ರತಿಯನ್ನು ಈ ನ್ಯಾಯಾಲಯವು ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಗೆ ಪೂರಕವಾಗಿ ಪರಿಶೀಲಿಸಿದೆ. ವಾದಿ ಸಹಕಾರ ಸಂಘವು ತನ್ನ ಅಧಿಭಾರ ಅರ್ಜಿಯೊಂದಿಗೆ 2004–05 ನೇ ಸಾಲಿನ ಲೆಕ್ಕಪರಿಶೋಧಕರ ಉದ್ಧೃತ ಭಾಗ, ಲೆಕ್ಕಪರಿಶೋಧಕರು ಪ್ರತಿವಾದಿಗೆ ನೀಡಿದ ನೋಟೀಸು, ಇಂಡಿಯನ್ ಬ್ಯಾಂಕ್, ಬೆನ್ಸನ್ ಟೌನ್, ಬೆಂಗಳೂರು ಶಾಖೆ, ಇವರು ಪ್ರತಿವಾದಿಯ ಉಳಿತಾಯ ಖಾತೆಗೆ ಸಂಬಂಧಿಸಿದಂತೆ ನೀಡಿರುವ ತಃಖ್ತೆ ಹಾಗೂ ಸದರಿ ಬ್ಯಾಂಕು ದಿನಾಂಕ:23.01.2006 ಮತ್ತು 28.01.2006 ಗಳಂದು ವಾದಿ ಸಹಕಾರ ಸಂಘಕ್ಕೆ ಬರೆದಿರುವ ಜೆರಾಕ್ಸ್ ಪ್ರತಿಗಳನ್ನು ಕೂಡಾ ಹಾಜರುಪಡಿಸಲಾಗಿದೆ. ವಾದಿ ಸಹಕಾರ ಸಂಘವು ಸಹಕಾರ ಸಂಘಗಳ ಕಾಯ್ದೆಯನ್ವಯ ನೋಂದಣಿಯಾದ ಸಹಕಾರ ಸಂಸ್ಥೆಯಾಗಿದೆ. ಸಂಘದ ಲೆಕ್ಕಪತ್ರಗಳು ಕಲಂ 63ರನ್ವಯ ಶಾಸನಬದ್ಧ ಲೆಕ್ಕಪರಿಶೋಧನೆಗೆ ಒಳಪಡುತ್ತವೆ. ಹೀಗಾಗಿ 2004–05ನೇ ಸಾಲಿನಲ್ಲಿ ಶಾಸನಬದ್ಧ ಲೆಕ್ಕಪರಿಶೋಧಕರು ವಾದಿ ಸಹಕಾರ ಸಂಘದ ಲೆಕ್ಕಪತ್ರಗಳನ್ನು ಪರಿಶೋಧಿಸಿ ವರದಿ ನೀಡಿರುವುದಾಗಿ ಸಂಘವು ಸ್ಪಷ್ಟವಾಗಿ ವಿವರಿಸಿರುವುದಲ್ಲದೇ ಸಂಬಂಧಿಸಿದ ಲೆಕ್ಕಪರಿಶೋಧನಾ ವರದಿಯ ಉದ್ಧೃತ ಭಾಗವನ್ನು ಈಗಾಗಲೇ ಗಮನಿಸಿದಂತೆ, ಅಧಿಭಾರ ಅರ್ಜಿಯೊಂದಿಗೆ ಲಗತ್ತಿಸಿ ಸಲ್ಲಿಸಲಾಗಿದೆ. ವರದಿಯನ್ನು ಪರಿಶೀಲಿಸಲಾಗಿ ಪ್ರತಿವಾಧಿಯು ದಿನಾಂಕ:31.01.2005ರಂದು ರೂ.14.15 ಲಕ್ಷಗಳ ಹಣವನ್ನು ಮೇಲೆ ವಿವರಿಸಿದ ಇಂಡಿಯನ್ ಬ್ಯಾಂಕಿನಿಂದ ಚೆಕ್ ಸಂಖ್ಯೆ: 059855 ಅನ್ನು ಬಳಸಿ ಸದರಿ ಬ್ಯಾಂಕಿನಲ್ಲಿ ಪ್ರತಿವಾದಿಯು ಹೊಂದಿರುವ ತಮ್ಮ ಸ್ವಂತ ಉಳಿತಾಯ ಖಾತೆ ಸಂಖ್ಯೆ 18922ಕ್ಕೆ ಜಮಾ ಮಾಡಿಕೊಂಡು ಹಣ ದುರುಪಯೋಗ ಮಾಡಿಕೊಂಡಿರುವುದಾಗಿ ಸ್ಪಷ್ಟವಾಗಿ ವಿವರಿಸಿದ್ದು, ಸದರಿ ರೂ.14.15 ಲಕ್ಷಗಳನ್ನು ಪ್ರತಿವಾದಿಯಿಂದ ಶೇಕಡಾ 18ರ ಬಡ್ಡಿಯೊಂದಿಗೆ ವಸೂಲು ಮಾಡಬೇಕೆಂದು ಸ್ಪಷ್ಟವಾಗಿ ಲೆಕ್ಕಪರಿಶೋಧಕರು ಅಭಿಪ್ರಾಯಪಟ್ಟಿದ್ದಾರೆ. ಇದೇ ರೀತಿ ರೂ.14,26,990–00ಗಳನ್ನು ಪ್ರತಿವಾದಿಯು ಚೆಕ್ ಸಂಖ್ಯೆ:059829ರ ಮೂಲಕ ಸ್ವಂತವಾಗಿ ಹಣವನ್ನು ವಾದಿ ಸಹಕಾರ

ಸಂಘದ ಅಧ್ಯಕ್ಷರಾಗಿ ಪಡೆದು ಈ ಮೇಲೆ ವಿವರಿಸಿದ ಬ್ಯಾಂಕಿನಲ್ಲಿ ಪ್ರತಿವಾದಿಯು ಹೊಂದಿರುವ ವೈಯಕ್ತಿಕ ಖಾತೆಗೆ ಜಮಾ ಮಾಡಿಕೊಂಡಿದ್ದಾರೆಂದು ಮತ್ತು ಪ್ರತಿವಾದಿಯು ಈ ಮೇಲೆ ವಿವರಿಸಿದ ಹಣವನ್ನು ಕೂಡಾ ಸ್ವಂತಕ್ಕೆ ಉಪಯೋಗ ಮಾಡಿಕೊಂಡು ವಾದಿ ಸಹಕಾರ ಸಂಘದ ಹಣ ದುರುಪಯೋಗ ಮಾಡಿದ್ದಾರೆಂದು ಲೆಕ್ಕಪರಿಶೋಧಕರು ತಮ್ಮ ವರದಿಯಲ್ಲಿ ಸ್ಪಷ್ಟವಾಗಿ ವಿವರಿಸಿದ್ದಾರೆ. ವಾದಿ ಸಹಕಾರ ಸಂಘವು ಹಾಜರುಪಡಿಸಿರುವ ಮೇಲೆ ವಿವರಿಸಿದ ದಾಖಲಾತಿಗಳನ್ನು ಮೇಲ್ನೋಟಕ್ಕೆ ಪರಿಶೀಲಿಸಲಾಗಿ, ಪ್ರತಿವಾದಿಯು ಒಟ್ಟಾರೆ ರೂ.28,41,990–00 ಗಳನ್ನು ದುರುಪಯೋಗ ಮಾಡಿಕೊಂಡಿರುವುದು ಕಂಡುಬರುತ್ತದೆ. ಕಲಂ 103ರ ಅರ್ಜಿಯನ್ನು ವಿರೋಧಿಸಿ ಪ್ರತಿವಾದಿಯು ಸಲ್ಲಿಸಿರುವ ಆಕ್ಷೇಪಣೆಗಳನ್ನು ಈಗಾಗಲೇ ಮೇಲಿನಂತೆ ಗಮನಿಸಲಾಗಿದೆ. ಪ್ರತಿವಾದಿಯು ಸಲ್ಲಿಸಿರುವ ಆಕ್ಷೇಪಣೆಗಳ ಹಿನ್ನೆಲೆಯಲ್ಲಿ ವಾದಿ ಸಹಕಾರ ಸಂಘವು ಹಾಜರುಪಡಿಸಿರುವ ಪ್ರಪತ್ರ ನಮೂನೆ 15ನ್ನು ಷೆಡ್ಯೂಲ್ ಆಸ್ತಿಗೆ ಸಂಬಂಧಿಸಿದಂತೆ ಪರಿಶೀಲಿಸಲಾಗಿ, ಷೆಡ್ಯೂಲ್ ಆಸ್ತಿಯನ್ನು ಪ್ರತಿವಾದಿಯು ದಿನಾಂಕ:07.08.2004 ರಂದು ರೂ.2.09 ಲಕ್ಷಗಳಿಗೆ ರೀನಾ ಗೋಯಲ್ ಇವರಿಂದ ಖರೀದಿ ಮಾಡಿರುವುದು ಸ್ಪಷ್ಟವಾಗಿರುತ್ತದೆ. ಹೀಗಾಗಿ ಪ್ರತಿವಾದಿಗೆ ಸೇರಿದ ಆಸ್ತಿಯು ಅವಿಭಕ್ತ ಕುಟುಂಬಕ್ಕೆ ಸೇರಿದ ಆಸ್ತಿಯೆಂದು ನಿರೂಪಿಸಲು ಯಾವುದೇ ಪ್ರತ್ಯೇಕ ದಾಖಲಾತಿಗಳನ್ನು ನ್ಯಾಯಾಲಯದ ಮುಂದೆ ಹಾಜರುಪಡಿಸಿರುವುದಿಲ್ಲ. ಹೀಗಾಗಿ ವಾದಿ ಸಹಕಾರ ಸಂಘವು ಕಲಂ 103 ರೀತ್ಯಾ ಸಲ್ಲಿಸಿರುವ ಅರ್ಜಿಯಲ್ಲಿ ವಿವರಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಅಲ್ಲದೇ ಪ್ರತಿವಾದಿಯು ಷೆಡ್ಯೂಲ್‌ನಲ್ಲಿ ವಿವರಿಸಿರುವ ಸ್ಥಿರಾಸ್ತಿಯನ್ನು ಮಾರಾಟ ಮಾಡುವುದನ್ನು ತಡೆಯದಿದ್ದಲ್ಲಿ ಈ ಪ್ರಕರಣದಲ್ಲಿ ನೀಡಬಹುದಾದ ಆದೇಶವನ್ನು ವಾದಿ ಸಹಕಾರ ಸಂಘವು ಜಾರಿಗೊಳಿಸಲು ಸಾಧ್ಯವಾದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆಯೆಂಬ ಅಂಶವನ್ನು ಈ ನ್ಯಾಯಾಲಯವು ಮನವರಿಕೆ ಮಾಡಿಕೊಂಡಿದೆ. ಕಾರಣ ಕೆಳಗಿನ ಆದೇಶ.

**ಆದೇಶ**

ಈ ಮೇಲೆ ವಿವರಿಸಿದ ಹಿನ್ನೆಲೆಯಲ್ಲಿ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 103(1)ರ ನ್ವಯ ಮತ್ತು ಸರ್ಕಾರ ಅಧಿಸೂಚನೆಯ ಕ್ರಮಾಂಕ ಸಿಎಂಡಬ್ಲ್ಯೂ/69/ಸಿಎಲ್ಎಂ 01 ದಿನಾಂಕ:21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತ ಎಂ.ಡಿ. ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪ ನಿಬಂಧಕರು, ಬೆಂಗಳೂರು ನಗರ ಜಿಲ್ಲೆ–2, ಬೆಂಗಳೂರು, ಆದ ನಾನು ಪ್ರತಿವಾದಿಗೆ ಸಂಬಂಧಿಸಿದಂತೆ ಈ ಕೆಳಗೆ ವಿವರಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೊಳಪಟ್ಟ ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

**SCHEDULE OF PROPERTY**

Apartment bearing No.S-302 approximately measuring 1200 sft built-up area bearing BMP Khata No.03, Konena Agrahara Main Road, Bangalore, measuring from East to West-55 ft and North to South 65 ft, bounded by:

East: Property of Nanjunda Reddy

West: Road

South: Property of Nanjunda Reddy

North: Property of Nanjunda Reddy

ಪ್ರತಿವಾದಿಯು ಒಂದು ವೇಳೆ ಈ ಜಪ್ತಿ ಪೂರ್ವ ಆದೇಶವನ್ನು ತೆರವುಗೊಳಿಸಲು ಇಚ್ಚಿಸಿದಲ್ಲಿ ರೂ.28,41,990–00 ಗಳನ್ನು ದಿನಾಂಕ:01.04.2005 ರಿಂದ ಅನ್ವಯವಾಗುವಂತೆ ಶೇಕಡಾ 18ರ ಬಡ್ಡಿ ದರದೊಂದಿಗೆ, ಈ ಪ್ರಾಧಿಕಾರವು ಬೆಂಗಳೂರು ಜಿಲ್ಲಾ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿಯಮಿತ, ಚಾಮರಾಜಪೇಟೆ, ಬೆಂಗಳೂರು ಇದರಲ್ಲಿ ಹೊಂದಿರುವ ಖಾತೆಗೆ ಈ ಆದೇಶದಿಂದ 30 ದಿನಗಳೊಳಗಾಗಿ ಅಥವಾ ಅದಕ್ಕೆ ಮುಂಚಿತವಾಗಿ ಜಮಾ ಮಾಡಿ ಅಧಿಕೃತ ಚಲನ್/ ರಸೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗೆ ಈ ಮೂಲಕ ಆದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಯು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೊಳಪಟ್ಟು ನೀಡಿರುವ ಈ ಜಪ್ತಿ ಪೂರ್ವ ಆದೇಶವನ್ನು ಸ್ಥಿರೀಕರಿಸಬಹುದಾಗಿದೆ.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಈ ದಿನ ಅಂದರೆ ದಿನಾಂಕ:26.12.2008ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,

ಪಿ.ಆರ್.87 ಬೆಂಗಳೂರು ನಗರ ಜಿಲ್ಲೆ–2, ಬೆಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/35/ ಡಿಟಿಸಿಆರ್/2008-09, ದಿನಾಂಕ:29ನೇ ನವೆಂಬರ್, 2008**

**ಉಪಸ್ಥಿತರು:** ನೂರ್‌ಮಹಮ್ಮದ್ ಹುಸೇನ್
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು:** | **ಆರೋಪಿ:** |
|---|---|
| ಅಬಕಾರಿ ಉಪ ನಿರೀಕ್ಷಕರು (1) ಪುತ್ತೂರು ವಲಯ, ಪುತ್ತೂರು. | ಪ್ರವೀಣ್ ಕುಮಾರ್, 29 ವರ್ಷ, ಬಿನ್ ರಾಮಣ್ಣ ನಾಯ್ಕ್, ಮುಂಡಕೊಚ್ಚಿ ಮನೆ, ಅರಿಯಡ್ಕ ಗ್ರಾಮ, ಪುತ್ತೂರು. (ವಾಹನದ ಮಾಲೀಕರು ಹಾಗೂ ಆರೋಪಿ) |

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ಉಪ ನಿರೀಕ್ಷಕರು (1), ಪುತ್ತೂರು ವಲಯ, ಪುತ್ತೂರು ಇವರು ದಿನಾಂಕ:26.08.2008ರಂದು ರಾತ್ರಿ 10.00 ಗಂಟೆ ಸಮಯದಲ್ಲಿ ಪುತ್ತೂರು ತಾಲ್ಲೂಕು ಪುತ್ತೂರು ಪೇಟೆಯ ಬೈಪಾಸ್ ಸರ್ಕಲ್‌ನಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಾಟ ಮಾಡುತ್ತಿರುವ ಬಗ್ಗೆ ದೊರೆತ ಖಚಿತ ವರ್ತಮಾನದ ಮೇರೆಗೆ ತಮ್ಮ ಸಿಬ್ಬಂದಿಯವರ ಸಮೇತ ಸದ್ರಿ ಸ್ಥಳದಲ್ಲಿ ರಸ್ತೆಗಾವಲು ನಡೆಸುತ್ತಿರುವಾಗ ಪುತ್ತೂರು ಪೇಟೆಯ ಬೈಪಾಸ್ ರಸ್ತೆಯಿಂದ ಕಾವು ಕಡೆಗೆ ಬರುತ್ತಿದ್ದ, ಬಜಾಜ್ ಆಟೋ ರಿಕ್ಷಾ ಸಂಖ್ಯೆ ಕೆಎ-21-4514 ನ್ನು ನಿಲ್ಲಿಸಲು ಸೂಚನೆ ನೀಡಿದಾಗ ಆಟೋರಿಕ್ಷಾ ಚಾಲಕ ರಿಕ್ಷಾವನ್ನು ದಾರಿ ಮಧ್ಯದಲ್ಲಿ ಬಿಟ್ಟು ಪರಾರಿಯಾಗಿರುತ್ತಾನೆ. ಆಟೋರಿಕ್ಷಾದ ಚಾಲಕನ ಹೆಸರು ಪ್ರವೀಣ್ ಕುಮಾರ್, ಬಿನ್ ರಾಮಣ್ಣ ನಾಯ್ಕ್, ಮುಂಡಕೊಚ್ಚಿ ಮನೆ, ಅರಿಯಡ್ಕ ಗ್ರಾಮ, ಪುತ್ತೂರು ಎಂಬುದುದಾಗಿದ್ದು, ಆಟೋ ರಿಕ್ಷಾದ ಮುಂಭಾಗದಲ್ಲಿ "ಸ್ಕಂದಶ್ರೀ" ಎಂದು ಹೆಸರು ನಮೂದಿಸಲಾಗಿರುವುದು. ಆಟೋರಿಕ್ಷಾವನ್ನು ಶೋಧನೆ ಮಾಡಲೆಂದು ಮಾನ್ಯ ನ್ಯಾಯಾಲಯದಿಂದ ಶೋಧನೆ ವಾರೆಂಟ್ ತರಲು ಕಾಲಾವಕಾಶ ಇಲ್ಲದಿರುವ ಕಾರಣ ಹಾಗೂ ಪುರಾವೆಗಳು ನಾಶವಾಗುವ ಕಾರಣದಿಂದ ತಮ್ಮ ಸಿಬ್ಬಂದಿಯವರ ಸಮಕ್ಷಮ, ಶೋಧನೆ ಮೆಮೊವನ್ನು ತಯಾರಿಸಿ, ಆಟೋ ರಿಕ್ಷಾವನ್ನು ಶೋಧನೆ ನಡೆಸಿದಾಗ ವಾಹನದ ಸೀಟಿನ ಹಿಂಬದಿಯಲ್ಲಿ ಮದ್ಯ ತುಂಬಿದ 5 ರಟ್ಟಿನ ಪೆಟ್ಟಿಗೆಗಳು ಈ ಕೆಳಗಿನಂತೆ ಇರುವುದು ಕಂಡುಬಂತು.

1) ವನ್ ಆಫ್ ವಿಸ್ಕಿ-180 ಎಂ.ಎಲ್.ನ 48 ಸೀಸೆಗಳಂತೆ ಒಟ್ಟು-3 ರಟ್ಟಿನ ಪೆಟ್ಟಿಗೆಗಳು-25.920 ಲೀಟರ್.

2) ಹೈವೇ ನಂ.1 ವಿಸ್ಕಿ-180 ಎಂ.ಎಲ್.ನ 48 ಸೀಸೆಗಳಂತೆ 1 ರಟ್ಟಿನ ಪೆಟ್ಟಿಗೆಯಲ್ಲಿ -8.640 ಲೀ.

3) 3 ವನ್ ಆಫ್ xxx ರಮ್-180 ಎಂ.ಎಲ್.ನ 48 ಸೀಸೆಗಳಂತೆ 1 ರಟ್ಟಿನ ಪೆಟ್ಟಿಗೆಯಲ್ಲಿ-8.640 ಲೀ (ಒಟ್ಟು 43.200 ಲೀಟರ್ ಮದ್ಯ)

ರಾಸಾಯನಿಕ ವಿಶ್ಲೇಷಣೆಗಾಗಿ ಪ್ರತಿ 5 ರಟ್ಟಿನ ಪೆಟ್ಟಿಗೆಗಳಿಂದ 180 ಎಂ.ಎಲ್.ನ ತಲಾ ಒಂದರಂತೆ 5 ಮದ್ಯದ ಬಾಟಲಿಗಳನ್ನು ತೆಗೆದು ಬಟ್ಟೆ ದಾರಗಳಿಂದ ಸುತ್ತಿ ಇಲಾಖೆಯ ಸೀಲು ಮಾಡಿ ಸ್ಥಳದಲ್ಲಿಯೇ ಮಾದರಿ ಸೀಲನ್ನು ತಯಾರಿಸಿ, ಮಾದರಿ ಬಾಟಲಿಗಳಿಗೂ ಹಾಗೂ ಮದ್ಯದ ಬಾಟಲಿಗಳಿಗೆ ಪರಾರಿಯಾದ ಆರೋಪಿಯ ಹೆಸರು ಮತ್ತು ವಿಳಾಸದ ಗುರುತಿನ ಚೀಟಿಯನ್ನು ಅಂಟಿಸಲಾಯಿತು. ಇದು ಕರ್ನಾಟಕ ಅಬಕಾರಿ ಕಾಯಿದೆ ಸೆಕ್ಷನ್-11 ಮತ್ತು 14ರ ಪ್ರಕಾರ ಅಪರಾಧವಾಗಿದ್ದು, ಸೆಕ್ಷನ್ 32, 34 ಮತ್ತು 38ಎ ಪ್ರಕಾರ ಶಿಕ್ಷಾರ್ಹ ಅಪರಾಧವಾಗಿರುವುದರಿಂದ ಪರಾರಿಯಾದ ಆರೋಪಿಯ ವಿರುದ್ಧ ತಕ್ಷೀರು ಸಂಖ್ಯೆ:7/2008-09 ದಿನಾಂಕ:26.08.2008ರಂದು ಮೊಕದ್ದಮೆಯನ್ನು ದಾಖಲಿಸಿರುತ್ತಾರೆ.

ಪ್ರಕರಣದ ತನಿಖೆಯನ್ನು ಕೈಗೊಂಡ ಅಬಕಾರಿ ಉಪ ನಿರೀಕ್ಷಕರು (1), ಪುತ್ತೂರು ವಲಯ ಇವರ ತನಿಖಾ ವರದಿ ಸಂಖ್ಯೆ: ಆರ್‌ಸಿಆರ್/23/2008-09 ದಿನಾಂಕ:17.09.2008ರ ವರದಿಯಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಬಜಾಜ್ ಆಟೋರಿಕ್ಷಾ ಸಂಖ್ಯೆ: ಕೆಎ-21-4514ರ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ಸಂಬಂಧ ಪಟ್ಟ ಸಾರಿಗೆ ಅಧಿಕಾರಿಯವರಿಂದ ಪಡೆದು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಬಿ ಎಕ್ಸ್‌ಟ್ರಾಕ್ಟ್ ವರದಿಯ ಪ್ರಕಾರ ವಾಹನದ ನೊಂದಣಿ ಸಂಖ್ಯೆ: ಕೆಎ-21-4514 ಬಜಾಜ್ ಆಟೋರಿಕ್ಷಾವಾಗಿದ್ದು, ಇದರ ಚಾಸಿಸ್ ನಂ. AAFBGF03681 ಮತ್ತು ಇಂಜಿನ್ ನಂ. AAMBGF08181 ಆಗಿದ್ದು, ಇದರ ನೊಂದಣಿ ಮಾಲೀಕ ಶ್ರೀ ಪ್ರವೀಣ್ ಕುಮಾರ್ ಬಿನ್ ರಾಮಣ್ಣ ನಾಯ್ಕ್, ಮುಂಡಕೊಚ್ಚಿ ಮನೆ, ಅರಿಯಡ್ಕ ಗ್ರಾಮ, ಪುತ್ತೂರು ಆಗಿರುತ್ತಾರೆ.

ವಾಹನದ ಬಿ ಎಕ್ಸ್‌ಟ್ರಾಕ್ಟ್ ವರದಿಯ ಪ್ರಕಾರ ವಾಹನದ ನೊಂದಣಿ ಮಾಲೀಕರಾದ ಶ್ರೀ ಪ್ರವೀಣ್ ಕುಮಾರ್ ಇವರಿಗೆ ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ 1965 ಸೆಕ್ಷನ್ 43 ಬಿ ಪ್ರಕಾರ ಕಾರಣ ಕೇಳಿ ನೋಟೀಸನ್ನು ನೊಂದಣಿ ಅಂಚೆ ಮೂಲಕ ನೀಡಲಾಗಿದ್ದು, ಸದರಿ ನೋಟೀಸನ್ನು ಆರ್.ಸಿ. ಮಾಲೀಕರಾದ ಶ್ರೀ ಪ್ರವೀಣ್ ಕುಮಾರ್ ಇವರು ಪಡೆದುಕೊಂಡಿರುವ ಬಗ್ಗೆ ಅಂಚೆ ನೊಂದಾಯಿತ ಸ್ವೀಕೃತಿ ದಿನಾಂಕ:03.11.2008ರಂದು ಈ ಪ್ರಾಧಿಕಾರಕ್ಕೆ ಬಂದಿರುತ್ತದೆ. ಆದರೆ

ಸದರಿ ವಾಹನದ ಮಾಲೀಕರು ಇದುವರೆಗೂ ಕಾರಣ ಕೇಳಿ ನೋಟೀಸಿಗೆ ಸಮಜಾಯಿಷಿಯನ್ನಾಗಲೀ ಅಥವಾ ವಾಹನದ ಬಿಡುಗಡೆಗಾಗಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಅಬಕಾರಿ ಉಪ ನಿರೀಕ್ಷಕರು (1), ಪುತ್ತೂರು ವಲಯ, ಪುತ್ತೂರು ಇವರ ತನಿಖಾ ವರದಿ ಸಂಖ್ಯೆ:23/2008–09 ದಿನಾಂಕ:25.10.2008ರ ವರದಿಯಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮದ್ಯದಿಂದ ತೆಗೆದ ಸ್ಯಾಂಪಲ್‌ಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಲಾಗಿದ್ದು, ರಾಸಾಯನಿಕ ವಿಶ್ಲೇಷಕರ ವರದಿ ಸಂಖ್ಯೆ: ಇ438–5 ದಿನಾಂಕ:04.10.2008ರ ವರದಿಯಲ್ಲಿ ಮದ್ಯದ ಮದ್ಯಸಾರ ಪ್ರಮಾಣ 42.0% ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ಸದರಿ ವರದಿಯಂತೆ ತಕ್ಷೀರಿನಲ್ಲಿ ವಶಪಡಿಸಿಕೊಂಡ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಶಿಫಾರಸ್ಸು ಮಾಡಿರುವ ಮೇರೆಗೆ ಈ ಪ್ರಾಧಿಕಾರದ ಆದೇಶ ಸಮ ಸಂಖ್ಯೆ: ದಿನಾಂಕ:06.12.2008ರ ಆದೇಶದಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನದ ಮುಟ್ಟುಗೋಲು ಪ್ರಕ್ರಿಯೆಯನ್ನು ಕಾಯ್ದಿರಿಸಿ, ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮದ್ಯವನ್ನು ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ ಇವರ ಸಮಕ್ಷಮ ಸೂಕ್ತ ಮಹಜರು ಕ್ರಮ ಜರುಗಿಸಿ ನಾಶಪಡಿಸಲು ಆದೇಶಿಸಲಾಗಿರುತ್ತದೆ.

ನಂತರ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಪರ ಸಾಕ್ಷಿಗಳನ್ನು ವಿಚಾರಣೆಗೆ ಒಳಪಡಿಸಿ ಸಾಕ್ಷಿಗಳ ಹೇಳಿಕೆಯನ್ನು ಪಡೆಯಲಾಗಿರುತ್ತದೆ. ಪ್ರತಿರಕ್ಷಾ ಸಾಕ್ಷಿಗಳು ಹಾಜರಾಗದೇ ಇದ್ದುದರಿಂದ ಪ್ರತಿ ರಕ್ಷಾ ಸಾಕ್ಷಿಗಳ ಹೇಳಿಕೆಯನ್ನು ಪಡೆಯಲಾಗಿರುವುದಿಲ್ಲ.

ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಜನ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಿಧಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

1) ದಿನಾಂಕ:26.08.2008ರಂದು ಬಜಾಜ್ ಆಟೋರಿಕ್ಷಾ ಸಂಖ್ಯೆ: ಕೆಎ–21–4514ರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೆ ಮದ್ಯ ಸಾಗಾಣಿಕೆ ಮಾಡಲಾಗಿದೆಯೇ?

2) ವಶಪಡಿಸಿಕೊಂಡಿರುವ ವಾಹನ ಮಾಲೀಕ ತಾನೆಂದು ತನಗೆ ತಿಳಿಯದೇ ಅಕ್ರಮ ಮದ್ಯ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನ ಮಾಲೀಕರು ಸಾಬೀತುಪಡಿಸಿದ್ದಾರೆಯೇ?

3) ಜಪ್ತುಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸ–1:**

ಶ್ರೀ ಯಾಕೂಬ್ ಖಾನ್, ಅಬಕಾರಿ ಉಪ ನಿರೀಕ್ಷಕರು (1) ಪುತ್ತೂರು ವಲಯ ಇವರು ದಿನಾಂಕ:26.12.2008ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಇವರು ಪ್ರಕರಣದ ಫಿರ್ಯಾದುದಾರರಾಗಿದ್ದು, ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ತಾನು ದಿನಾಂಕ:04.04.2008ರಿಂದ ಪುತ್ತೂರು ವಲಯ ಅಬಕಾರಿ ಉಪ ನಿರೀಕ್ಷಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ದಿನಾಂಕ:26.08.2008ರಂದು ರಾತ್ರಿ 10.00 ಗಂಟೆ ಸಮಯಕ್ಕೆ ಪುತ್ತೂರು ಪೇಟೆಯ ಬೈಪಾಸ್ ಸರ್ಕಲ್‌ನಲ್ಲಿ ದುಗ್ಗಣ್ಣ ದೇರಣ್ಣ ಕಲ್ಯಾಣ ಮಂಟಪದ ಮುಂಭಾಗದಲ್ಲಿ ರಸ್ತೆ ಗಾವಲು ನಡೆಸುತ್ತಿದ್ದಾಗ ಪುತ್ತೂರು ಪೇಟೆ ಬೈಪಾಸ್ ರಸ್ತೆಯಿಂದ ಕಾವು ಕಡೆ ಹೋಗುತ್ತಿದ್ದ ಬಜಾಜ್ ಆಟೋ ರಿಕ್ಷಾ ಇದರ ನೊಂದಣಿ ಸಂಖ್ಯೆ: ಕೆಎ–21–4514 ಇದನ್ನು ತಡೆದು ನಿಲ್ಲಿಸಲಾಗಿದ್ದು, ಅದರ ಚಾಲಕನು ನಮ್ಮನ್ನು ನೋಡಿ ಪರಾರಿಯಾಗಿರುತ್ತಾನೆ. ಸದರಿ ಚಾಲಕನ ಹೆಸರು ಪ್ರವೀಣ್ ಕುಮಾರ್, ಪ್ರಾಯ:29 ವರ್ಷ, ತಂದೆ: ರಾಮಣ್ಣ ನಾಯ್ಕ, ಮುಂಡಕೊಚ್ಚಿ ಮನೆ, ಅರಿಯಡ್ಕ ಗ್ರಾಮ, ಪುತ್ತೂರು ತಾಲ್ಲೂಕು ಎಂಬುವವನಾಗಿದ್ದು, ಆಟೋರಿಕ್ಷಾದ ಮುಂಭಾಗದಲ್ಲಿ ಸ್ಕಂದ ಶ್ರೀ ಎಂದು ಹೆಸರು ನಮೂದಿಸಲಾಗಿತ್ತು. ಸದರಿ ವಾಹನವನ್ನು ಪರಿಶೀಲಿಸಲಾಗಿ ಅದರಲ್ಲಿ ಮದ್ಯ ತುಂಬಿದ ರಟ್ಟಿನ ಪೆಟ್ಟಿಗೆಗಳಿದ್ದುದು ಕಂಡು ಬಂತು. ಸದರಿ ವಾಹನದ ಶೋಧನೆ ಮಾಡಲು ಮಾನ್ಯ ನ್ಯಾಯಾಲಯದಿಂದ ಶೋಧನೆ ವಾರೆಂಟ್ ತರಲು ಕಾಲಾವಕಾಶ ಇಲ್ಲದಿರುವ ಕಾರಣ ಹಾಗೂ ಪುರಾವೆ ಮಾಸಿ ಹೋಗುವ ಕಾರಣ ನಮ್ಮ ಸಿಬ್ಬಂದಿಯ ಸಮಕ್ಷಮ ಒಂದು ಶೋಧನೆ ಮೆಮೊವನ್ನು ತಯಾರಿಸಿ ವಾಹನವನ್ನು ಶೋಧಿಸಲಾಯಿತು. ಸದರಿ ಶೋಧನೆ ಮೆಮೊ ಪ್ರತಿಯನ್ನು ಈ ದಿನ ವಿಚಾರಣೆ ಸಂದರ್ಭದಲ್ಲಿ ನಾನು ಗುರುಗಿಸಿದ್ದು ಈ ದಾಖಲೆಯನ್ನು ನಿಶಾನೆ ಪಿ–1 ಎಂದು ಗುರುತಿಸಲಾಯಿತು. ವಾಹನದ ಸೀಟಿನ ಹಿಂಬದಿ ಒಟ್ಟು 5 ರಟ್ಟಿನ ಪೆಟ್ಟಿಗೆಗಳು ಇದ್ದುದು ಕಂಡು ಬಂತು ಅವುಗಳನ್ನು ಪರಿಶೀಲಿಸಲಾಗಿ–180 ಎಂ.ಎಲ್.ನ ವನ್ ಆಫ್ ವಿಸ್ಕಿ ಎಂಬ ಲೇಬಲ್ ಇರುವ–48 ಬಾಟಲಿಗಳು ಒಟ್ಟು 3 ರಟ್ಟಿನ ಪೆಟ್ಟಿಗೆಗಳು, 1 ರಟ್ಟಿನ ಪೆಟ್ಟಿಗೆಯಲ್ಲಿ 180 ಎಂ.ಎಲ್.ನ ಹೈವೇ ನಂ.1 ವಿಸ್ಕಿ–48 ಸೀಸೆಗಳು ಹಾಗೂ 180 ಎಂ.ಎಲ್.ನ ವನ್ ಆಫ್ ರಮ್ xxx ರಮ್ 48 ಸೀಸೆಗಳಂತೆ 1 ರಟ್ಟಿನ ಪೆಟ್ಟಿಗೆಯಲ್ಲಿ ಇದ್ದದ್ದು ಕಂಡು ಬಂತು. ನಂತರ ರಾಸಾಯನಿಕ ವಿಶ್ಲೇಷಣೆಗಾಗಿ ದೊರೆತ 5 ರಟ್ಟಿನ ಪೆಟ್ಟಿಗೆಗಳಿಂದ ತಲಾ 1 ರಂತೆ 180 ಮಿಲಿ ತುಂಬಿದ ಒಟ್ಟು 5 ಮದ್ಯದ ಬಾಟಲಿಗಳನ್ನು ತೆಗೆಯಲಾಯಿತು. ಸದರಿ ಬಾಟಲಿಗಳಿಗೆ ಬಟ್ಟೆ ದಾರ ಕಟ್ಟಿ ಇಲಾಖಾ ಸೀಲಿನಿಂದ ಸೀಲು ಮಾಡಲಾಯಿತು. ಸ್ಥಳದಲ್ಲಿಯೇ ಮಾದರಿ ಸೀಲನ್ನು ತಯಾರಿಸಲಾಯಿತು. ಸದರಿ ಮಾದರಿಗಳಿಗೆ ಹಾಕಲಾದ ಇಲಾಖಾ ಸೀಲನ್ನು ಈ ದಿನ ವಿಚಾರಣೆ ಸಂದರ್ಭದಲ್ಲಿ ನಾನು ಗುರುತಿಸಿದ್ದು ಈ ದಾಖಲೆಯನ್ನು ನಿಶಾನೆ ಪಿ–2 ಎಂದು ಗುರುತಿಸಲಾಯಿತು. ಆರೋಪಿಯ

ಹೆಸರು, ವಿಳಾಸ ಇರುವ ಗುರುತು ಚೀಟಿಯನ್ನು ಮಾದರಿ ಬಾಟಲಿಗಳಿಗೂ, ಸಿಕ್ಕಿದ ಸೊತ್ತುಗಳಿಗೂ ಅಂಟಿಸಲಾಯಿತು. ಸದರಿ ವಾಹನಕ್ಕೆ ಸಂಬಂಧಿಸಿದ ಯಾವುದೇ ದಾಖಲೆ ಪತ್ರಗಳು ಸಿಕ್ಕಿರುವುದಿಲ್ಲ. ಕರ್ನಾಟಕ ಅಬಕಾರಿ ಕಾಯಿದೆ ಪ್ರಕಾರ ಇದು ಒಂದು ಅಕ್ರಮ ಸಾಗಾಟ ಪ್ರಕರಣವಾಗಿರುವುದರಿಂದ ಸದರಿ ಸೊತ್ತುಗಳನ್ನು ವಶಪಡಿಸಿಕೊಂಡು ಆರೋಪಿ ಇಲ್ಲದಿರುವ ಕಾರಣ ಇಲಾಖಾ ಸಿಬ್ಬಂದಿಯವರನ್ನೇ ಪಂಚರನ್ನಾಗಿ ಇರಿಸಿಕೊಂಡು ಸ್ಥಳದಲ್ಲೇ ಸೊತ್ತುಗಳ ಜಪ್ತಿನ ಬಗ್ಗೆ ಮಹಜರನ್ನು ಮತ್ತು ಸೊತ್ತು ಪಟ್ಟಿಗಳನ್ನು ತಯಾರಿಸಲಾಯಿತು. ಸದರಿ ಮಹಜರನ್ನು ನಿಶಾನೆ ಪಿ–3 ಎಂದು ಗುರುತಿಸಲಾಯಿತು. ಮತ್ತು ಜಪ್ತುಪಡಿಸಿದ ಸೊತ್ತುಗಳ ಪಟ್ಟಿಯನ್ನು ನಿಶಾನೆ ಪಿ–4 ಎಂದು ಗುರುತಿಸಿರುತ್ತೇನೆ. ಮತ್ತು ಸುಮಾರು 11–00 ಗಂಟೆ ರಾತ್ರಿಗೆ ಕಛೇರಿಗೆ ವಾಪಾಸ್ಸು ಬಂದು ಪತ್ತೆ ಮಾಡಲಾದ ಪ್ರಕರಣಕ್ಕೆ ಸಂಬಂಧಿಸಿ ಮೊಕದ್ದಮೆ ದಾಖಲಿಸಿ ಪ್ರಥಮ ಮಾಹಿತಿ ವರದಿಯನ್ನು ತಯಾರಿಸಲಾಯಿತು. ಸದರಿ ಪ್ರಥಮ ಮಾಹಿತಿ ವರದಿಯನ್ನು ನಿಶಾನೆ ಪಿ–5 ಎಂದು ಗುರುತಿಸಲಾಯಿತು. ಮರುದಿವಸ ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯ, ಪುತ್ತೂರು ಇವರಿಗೆ ಮೊಕದ್ದಮೆಯ ಪ್ರಥಮ ಮಾಹಿತಿ ವರದಿಯನ್ನು ಒಪ್ಪಿಸಿರುತ್ತೇನೆ. ಹಾಗೂ ಈ ಪ್ರಾಧಿಕಾರಕ್ಕೆ ಸೊತ್ತುಗಳ ವರದಿ, ಮಹಜರು ಹಾಗೂ ಪ್ರಥಮ ಮಾಹಿತಿ ವರದಿಗಳನ್ನು ಅದೇ ದಿನ ಒಪ್ಪಿಸಿರುತ್ತೇನೆ. ದಿನಾಂಕ:28.08.2008ರಂದು ಪ್ರಕರಣಕ್ಕೆ ಸಂಬಂಧಿಸಿದ 180 ಎಂಎಲ್‌ನ 5 ಮಾದರಿ ಸೀಸೆಗಳನ್ನು ನಮ್ಮ ಕಛೇರಿಯ ಅಬಕಾರಿ ರಕ್ಷಕನಾದ ವಿಶ್ವನಾಥ ಗೌಡ ಇವರ ಮೂಲಕ ರಾಸಾಯನಿಕ ವಿಶ್ಲೇಷಕರ ಕಛೇರಿ, ಮಂಗಳೂರು ಇವರಿಗೆ ಕಳುಹಿಸಿ ಕೊಟ್ಟಿರುತ್ತೇನೆ. ಸದರಿ ರಾಸಾಯನಿಕ ವಿಶ್ಲೇಷಕರ ಕಛೇರಿಯಿಂದ ದಿನಾಂಕ:17.10.2008ರಂದು ರಾಸಾಯನಿಕ ವಿಶ್ಲೇಷಣ ವರದಿ ಪಡೆದುಕೊಂಡಿರುತ್ತೇನೆ. ಸದರಿ ವರದಿಯನ್ನು ನಿಶಾನೆ ಪಿ–6 ಎಂದು ಗುರುತಿಸಲಾಯಿತು. ನಂತರ ವಶಪಡಿಸಿಕೊಳ್ಳಲಾದ ಆಟೋ ರಿಕ್ಷಾ ಸಂಖ್ಯೆ: ಕೆಎ–21–4154 ಇದರ ಮಾಲೀಕತ್ವದ ಬಗ್ಗೆ ಮಾಹಿತಿ ಪಡೆಯಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಪುತ್ತೂರು ಇವರಿಗೆ ಬಿ ಎಕ್ಸ್‌ಟ್ರಾಕ್ಟ್ ವರದಿ ನೀಡಲು ಪತ್ರ ಬರೆದಿರುತ್ತೇನೆ. ಸದರಿ ಪತ್ರವನ್ನು ನಿಶಾನೆ ಪಿ–7 ಎಂದು ಗುರುತಿಸಲಾಯಿತು. ಹಾಗೂ ಸದರಿ ವಾಹನದ ಬಗ್ಗೆ ದಿನಾಂಕ:28.08.2008 ರಂದೇ ಬಿ ಎಕ್ಸ್‌ಟ್ರಾಕ್ಟ್ ವರದಿ ಪಡೆದುಕೊಂಡಿರುತ್ತೇನೆ. ಸದರಿ ವರದಿಯನ್ನು ನಿಶಾನೆ ಪಿ–8 ಎಂದು ಗುರುತಿಸಲಾಯಿತು. ಸದರಿ ಬಿ ಎಕ್ಸ್‌ಟ್ರಾಕ್ಟ್ ವರದಿ ಪ್ರಕಾರ ಅಪರಾಧ ಸಂದರ್ಭದಲ್ಲಿ ಆಟೋರಿಕ್ಷಾವನ್ನು ಬಿಟ್ಟು ಪರಾರಿಯಾಗಿದ್ದ ವ್ಯಕ್ತಿ ಪ್ರವೀಣ್ ಕುಮಾರ್, ಬಿನ್ ರಾಮಣ್ಣ ನಾಯ್ಕ ಇವರೇ ವಾಹನದ ಮಾಲೀಕರು ಎಂಬುದಾಗಿ ತಿಳಿಸಿರುತ್ತಾರೆ. ಸದರಿ ಬಿ ಎಕ್ಸ್‌ಟ್ರಾಕ್ಟ್ ವರದಿ ಹಾಗೂ ರಾಸಾಯನಿಕ ವಿಶ್ಲೇಷಕರ ವರದಿಗಳನ್ನು ಒಪ್ಪಿಸಿ ದಿನಾಂಕ:25.10.2008 ರಂದು ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರಿಗೆ ಪ್ರಕರಣಕ್ಕೆ ಸಂಬಂಧಿಸಿ ವಶಪಡಿಸಿಕೊಳ್ಳಲಾದ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಪ್ರಸ್ತಾವನೆಯನ್ನು ಒಪ್ಪಿಸಿರುತ್ತೇನೆ. ಸದರಿ ಪ್ರಸ್ತಾವನೆ ಪ್ರತಿಯನ್ನು ನಿಶಾನೆ ಪಿ–9 ಎಂದು ಗುರುತಿಸಲಾಯಿತು. ನಂತರ ದಿನಾಂಕ:24.10.2008 ರಂದು ಈ ಪ್ರಕರಣಕ್ಕೆ ಸಂಬಂಧಿಸಿ ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯ, ಪುತ್ತೂರು ಇವರ ನ್ಯಾಯಾಲಯದಲ್ಲಿ ಆರೋಪಿ ವಿರುದ್ಧ ದೋಷಾರೋಪಣ ಪಟ್ಟಿಯನ್ನು ಸಲ್ಲಿಸಿರುತ್ತೇನೆ ಎಂದು ಸಾಕ್ಷಿ ನೀಡಿರುತ್ತಾರೆ.

ವಾಹನದ ಮಾಲೀಕರಾದ ಶ್ರೀ ಪ್ರವೀಣ್ ಕುಮಾರ್‌ರವರಿಗೆ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರಡಿ ವಾಹನದ ಮುಟ್ಟುಗೋಲು ಸಂಬಂಧ ನೀಡಿದ ನೋಟೀಸು ಜಾರಿಯಾಗಿ ಸ್ವೀಕೃತಿಯು ಅಂಚೆ ಇಲಾಖೆಯಿಂದ ವಾಪಸ್ಸು ಈ ಪ್ರಾಧಿಕಾರಕ್ಕೆ ಬಂದಿರುತ್ತದೆ ಹಾಗೂ ಹಾಜರಾತಿ ನೋಟೀಸು ಸಹ ಜಾರಿಯಾಗಿರುತ್ತದೆ. ಆದರೆ ವಾಹನದ ಮಾಲೀಕರು ಈ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವ ಪ್ರಯುಕ್ತ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಗಿದೆ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ, ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು, ಅವುಗಳು ಕಾನೂನು ಬದ್ಧವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಸಾಬೀತು ಪಡಿಸದೇ ಇದ್ದಲ್ಲಿ, ಸದರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ ಅಂತಹ ಸೊತ್ತುಗಳನ್ನು ಕಲಂ 43ಎ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಈ ಪ್ರಕರಣದ ಫಿರ್ಯಾದುದಾರರು ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿನಾಂಕ:26.08.2008ರಂದು ಜಪ್ತುಪಡಿಸಿರುವ ಬಜಾಜ್ ಆಟೋರಿಕ್ಷಾ ಸಂಖ್ಯೆ: ಕೆಎ–21–4514ರಲ್ಲಿ ವಾಹನದ ಮಾಲೀಕರೇ ಸ್ವತಃ ಅಕ್ರಮವಾಗಿ ತನ್ನ ವಾಹನದಲ್ಲಿ ಮದ್ಯ ಸಾಗಾಣಿಕೆ ಮಾಡಿ, ಪರಾರಿಯಾಗಿರುವುದು ಪಿಡಬ್ಲ್ಯೂ–1ರವರ ಸಾಕ್ಷ್ಯದಿಂದ ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಇದು ಅಕ್ರಮ ಮದ್ಯ ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂಬುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸುವುದು ವಾಹನ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಆದರೆ ಈ ಪ್ರಕರಣದ ವಾಹನದ ಮಾಲೀಕರಿಗೆ ಕಲಂ 43(ಬಿ) ಅಡಿಯಲ್ಲಿ ಕಾರಣ ಕೇಳಿ ನೋಟೀಸು ಮತ್ತು ಹಾಜರಾತಿ ನೋಟೀಸು ನೋಂದಾಯಿತ ಅಂಚೆ ಮೂಲಕ ನೀಡಲಾಗಿದ್ದರೂ, ಸದರಿ ನೋಟೀಸನ್ನು ಆರ್.ಸಿ. ಮಾಲೀಕರಾದ ಶ್ರೀ ಪ್ರವೀಣ್ ಕುಮಾರ್ ಇವರು ದಿನಾಂಕ:03.11.2008

ರಂದು ಸ್ವೀಕರಿಸಿದ್ದು, ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು ನಾಲ್ಕು ತಿಂಗಳು ಕಳೆದಿದ್ದರೂ ಕಾರಣ ಕೇಳಿ ನೋಟೀಸಿಗೆ ಯಾವುದೇ ಸಮಜಾಯಿಷಿ ಉತ್ತರ ನೀಡದಿದ್ದು, ವಾಹನದ ಮಾಲೀಕರು ತನ್ನ ವಾಹನವನ್ನು ಪಡೆದುಕೊಳ್ಳುವ ಬಗ್ಗೆ ಕಾನೂನು ರೀತ್ಯಾ ಯಾವುದೇ ಕ್ರಮ ಕೈಗೊಳ್ಳದೇ ಇರುವುದು ಹಾಗೂ ವಾಹನದ ಮಾಲೀಕರು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷ್ಯಾಧಾರಗಳೊಂದಿಗೆ ವಾಹನವನ್ನು ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಮದ್ಯ ಸಾಗಾಣಿಕೆಗೆ ಉಪಯೋಗಿಸಲಾಗಿದೆ ಎಂದು ರುಜುವಾತುಪಡಿಸಲು ವಿಫಲರಾಗಿರುವುದನ್ನು ಪರಿಗಣಿಸಿದಾಗ, ವಾಹನದ ಮಾಲೀಕರು ತನ್ನ ತಿಳುವಳಿಕೆಯಿಂದಲೇ ತನ್ನ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದಲ್ಲದೆ ನಿಶಾನೆ ಪಿ–6ರ ಪ್ರಕಾರ ಸಾಬೀತಾಗಿರುತ್ತದೆ. ಹಾಗೂ ಈ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದನ್ನು ಗಮನಿಸಿದಾಗ ವಾಹನ ಮಾಲೀಕರು ತನ್ನ ತಿಳುವಳಿಕೆಯಿಂದಲೇ ವಾಹನವನ್ನು ಅಕ್ರಮ ಮದ್ಯ ಸಾಗಾಣಿಕೆಗೆ ಬಳಸಿರುವುದು ನಿಸ್ಸಂದೇಹವಾಗಿ ಸಾಬೀತಾಗಿರುತ್ತದೆ. ಈ ಮೇಲಿನ ಕಾರಣಗಳಿಂದ ಎರಡನೇ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಬಜಾಜ್ ಆಟೋರಿಕ್ಷಾವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿ ಕಂಡು ಬಂದಿರುವುದರಿಂದ ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಬಜಾಜ್ ಆಟೋರಿಕ್ಷಾ ಸಂಖ್ಯೆ: ಕೆಎ–21–4514 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ನೇ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ, ಅಬಕಾರಿ ಉಪ ನಿರೀಕ್ಷಕರು(1), ಪುತ್ತೂರು ವಲಯ, ಪುತ್ತೂರು ಇವರ ತಕ್ಷೀರು ಸಂಖ್ಯೆ:7/2008–09 ದಿನಾಂಕ:26.08.2008ರಲ್ಲಿ ಜಪ್ತು ಪಡಿಸಿಕೊಂಡಿರುವ ಬಜಾಜ್ ಆಟೋರಿಕ್ಷಾ ನಂ.ಕೆಎ–21–4514 (ಚಾಸಿಸ್ ನಂ. AAFBGF03681 ಇಂಜಿನ್ ನಂ. AAMBGF08181) ನ್ನು ನಿಯಮ 43ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:29.12.2008ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶ ಕುರಿತು ವಾಹನದ ವಿಲೆಯನ್ನು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ತರಲು ಆದೇಶಿಸಿದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–I**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ–1 : ಶ್ರೀ ಯಾಕೂಬ್ ಖಾನ್ ಅಬಕಾರಿ ಉಪ ನಿರೀಕ್ಷಕರು (1), ಪುತ್ತೂರು ವಲಯ.

**ಅನುಬಂಧ–II**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ–1 : ಶೋಧನೆ ಮೆಮೊ
ನಿಶಾನೆ ಪಿ–2 : ಮಾದರಿ ಸೀಲು
ನಿಶಾನೆ ಪಿ–3 : ಮಹಜರು ಪ್ರತಿ
ನಿಶಾನೆ ಪಿ–4 : ಜಪ್ತುಪಡಿಸಿದ ಸೊತ್ತುಗಳ ಪಟ್ಟಿ
ನಿಶಾನೆ ಪಿ–5 : ಪ್ರಥಮ ವರ್ತಮಾನ ವರದಿ
ನಿಶಾನೆ ಪಿ–6 : ರಸಾಯನಿಕ ವಿಶ್ಲೇಷಣಾ ವರದಿ
ನಿಶಾನೆ ಪಿ–7 : ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ತನಿಖಾಧಿಕಾರಿಗಳು ಬರೆದಪತ್ರ
ನಿಶಾನೆ ಪಿ–8 : ವಾಹನದ ಬಿ ಎಕ್ಸ್‌ಟ್ರಾಕ್ಟ್ ವರದಿ
ನಿಶಾನೆ ಪಿ–9 : ತನಿಖಾ ವರದಿ

**ಅನುಬಂಧ–III**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:**

**ಅರ್ಜಿದಾರರ ಹೇಳಿಕೆ: – ಯಾವುದೂ ಇಲ್ಲ –**

**ಅನುಬಂಧ–IV**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು: – ಯಾವುದು ಇಲ್ಲ–**

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.81

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/343/ ಡಿಟಿಸಿಆರ್/2006-07, ದಿನಾಂಕ:22ನೇ ಡಿಸೆಂಬರ್, 2008**

**ಉಪಸ್ಥಿತರು:** ನೂರ್‌ಮಹಮ್ಮದ್ ಹುಸೇನ್
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**
ಪೊಲೀಸ್ ನಿರೀಕ್ಷಕರು ಮಂಗಳೂರು ದಕ್ಷಿಣ ಪೊಲೀಸ್ ಠಾಣೆ, ಮಂಗಳೂರು.

**ಆರೋಪಿಗಳು:**
1) ಬಶೀರ್ ಅಲಿಯಾಸ್ ಅಬ್ದುಲ್ ರಶೀದ್ ಬಿನ್ ಮಹಮ್ಮದ್ ಕುಂಞ್ಞಿ, ಕಡಂಬಾರು ಹೌಸ್, ಕಡಂಬಾರು ಪೋಸ್ಟ್, ಹೊಸಂಗಡಿ, ಮಂಜೇಶ್ವರ, ಕಾಸರಗೋಡು, ಕೇರಳ.
2) ಅಬ್ದುಲ್ ರಹಿಮಾನ್ ಬಿನ್ ಮಹಮ್ಮದ್ ಕುಂಞ್ಞಿ, ಕಡಂಬಾರು ಹೌಸ್, ಕಡಂಬಾರು ಪೋಸ್ಟ್, ಹೊಸಂಗಡಿ, ಮಂಜೇಶ್ವರ, ಕಾಸರಗೋಡು, ಕೇರಳ ಮತ್ತು ಇತರ ಈರ್ವರು ಆರೋಪಿಗಳು.

**ಪ್ರಕರಣದ ಮುಖ್ಯಾಂಶಗಳು:**

ಪೊಲೀಸ್ ನಿರೀಕ್ಷಕರು, ಮಂಗಳೂರು ದಕ್ಷಿಣ ಪೊಲೀಸ್ ಠಾಣೆ, ಮಂಗಳೂರು ಇವರು ತಮ್ಮ ಸಿಬ್ಬಂದಿ ಮತ್ತು ಪಂಚರೊಂದಿಗೆ ದಿನಾಂಕ:14.06.2005ರಂದು ಕಾರೊಂದರಲ್ಲಿ ಅಕ್ರಮವಾಗಿ ಸಾರಾಯಿ ಸ್ಯಾಚೇಟುಗಳನ್ನು ಕೇರಳಕ್ಕೆ ಸಾಗಾಟ ಮಾಡಲಾಗುತ್ತಿದೆ ಎಂದು ದೊರೆತ ಖಚಿತ ವರ್ತಮಾನದ ಮೇರೆಗೆ 17-30 ಗಂಟೆ ಸಮಯಕ್ಕೆ ಮಂಗಳೂರು ನಗರದ ಮಹಾಕಾಳಿಪಡ್ಪು ರೈಲ್ವೆ ಓವರ್ ಬ್ರಿಡ್ಜ್‌ನ ಕೆಳಗೆ ಉಳ್ಳಾಲ ಕಡೆಗೆ ಹೋಗುವ ಕಾಂಕ್ರಿಟ್ ರಸ್ತೆಯಲ್ಲಿ ತಮ್ಮ ಸಿಬ್ಬಂದಿ ಮತ್ತು ಪಂಚರೊಂದಿಗೆ ರಸ್ತೆ ಗಾವಲು ಮಾಡುತ್ತಿರುವಾಗ ಮಾರ್ಗನ್‌ಗೇಟ್ ಸರ್ಕಲ್‌ನಿಂದ ಮಾರುತಿ ಕಾರೊಂದು ಮಹಾಕಾಳಿಪಡ್ಪು ಓವರ್ ಬ್ರಿಡ್ಜ್ ಕಡೆಗೆ ಬರುವುದನ್ನು ಗಮನಿಸಿ ಸದರಿ ಕಾರನ್ನು ನಿಲ್ಲಿಸುವಂತೆ ಸೂಚಿಸಿದಾಗ, ಸದರಿ ಕಾರಿನ ಚಾಲಕನು ಕಾರನ್ನು ನಿಲ್ಲಿಸಿ, ಕಾರನ್ನು ಪರಿಶೀಲಿಸಲಾಗಿ ಸದರಿ ಕಾರು ಕೆಎ-19-ಎನ್-3985 ನಂಬರ್ ಪ್ಲೇಟು ಅಳವಡಿಸಲಾಗಿರುವ ಮಾರುತಿ 800 ಕಾರು ಆಗಿದ್ದು, ಸದರಿ ಕಾರನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ಅದರಲ್ಲಿ 12 ಬಿಳಿ ಬಣ್ಣದ ಪ್ಲಾಸ್ಟಿಕ್ ಚೀಲಗಳು ಇದ್ದು, ಅದನ್ನು ತೆರೆದು ನೋಡಲಾಗಿ ಸದರಿ ಚೀಲಗಳ ಪೈಕಿ 11 ಚೀಲಗಳಲ್ಲಿ 100 ಎಂಎಲ್‌ನ ತಲಾ 500 ಸ್ಯಾಚೇಟುಗಳಂತೆ ಒಟ್ಟು 5,500 ಸಾರಾಯಿ ಸ್ಯಾಚೇಟುಗಳು ಮತ್ತು ಇನ್ನೊಂದು ಚೀಲದಲ್ಲಿ 400 ಸ್ಯಾಚೇಟುಗಳು ಇದ್ದು ಈ ರೀತಿಯಾಗಿ ಒಟ್ಟು 5,900 ಸಾರಾಯಿ ಸ್ಯಾಚೇಟುಗಳು ಹಾಗೂ ಎಲ್.ಜಿ. ಕಂಪೆನಿಯ ಮೊಬೈಲ್ ಸೆಟ್ಟು-1 ಇರುವುದನ್ನು ಪತ್ತೆ ಹಚ್ಚಿ, ಸದರಿ ಸಾರಾಯಿ ಸಾಗಾಟ ಮಾಡಲು ಯಾವುದೇ ದಾಖಲಾತಿಗಳು ಕಾರಿನಲ್ಲಿ ಪತ್ತೆಯಾಗದೇ ಇದ್ದು, ಇದು ಅಕ್ರಮ ಸಾರಾಯಿ ಸಾಗಾಟವಾಗಿರುವುದರಿಂದ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 32, 34ರ ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ, ಸದರಿ ಸೊತ್ತುಗಳನ್ನು ಪಂಚರ ಸಮಕ್ಷಮ ಜಪ್ತು ಮಾಡಿ, ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿ, ಕಾರಿನಲ್ಲಿದ್ದ 1) ಬಶೀರ್ ಅಲಿಯಾಸ್, ಬಶೀರ್ ಅಲಿಯಾಸ್ ಅಬ್ದುಲ್ ರಶೀದ್, ಬಿನ್ ಮಹಮ್ಮದ್ ಕುಂಞ್ಞಿ, ಕಡಂಬಾರು ಹೌಸ್, ಕಡಂಬಾರು ಪೋಸ್ಟ್, ಹೊಸಂಗಡಿ, ಮಂಜೇಶ್ವರ, ಕಾಸರಗೋಡು, ಕೇರಳ 2) ಅಬ್ದುಲ್ ರಹಿಮಾನ್ ಬಿನ್ ಮಹಮ್ಮದ್ ಕುಂಞ್ಞಿ, ಕಡಂಬಾರು ಹೌಸ್, ಕಡಂಬಾರು ಪೋಸ್ಟ್, ಹೊಸಂಗಡಿ, ಮಂಜೇಶ್ವರ, ಕಾಸರಗೋಡು, ಕೇರಳ, ಇವರ ವಿರುದ್ಧ ತಕ್ಷೀರು ಸಂಖ್ಯೆ: 206/2005 ದಿನಾಂಕ:14.06.2005 ರಂದು ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿ, ಮಹಜರು ಮತ್ತು ಸೊತ್ತುಗಳ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ಮಾನ್ಯ ನ್ಯಾಯಾಲಯದ ಆದೇಶದ ಮೇರೆಗೆ ಸೊತ್ತು ಮತ್ತು ಕಡತವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸುವರೇ ಪೊಲೀಸ್ ನಿರೀಕ್ಷಕರು, ಮಂಗಳೂರು ದಕ್ಷಿಣ ಪೊಲೀಸ್ ಠಾಣೆ ಇವರು ಪ್ರಾಧಿಕಾರದಲ್ಲಿ ಕೋರಿದ ಮೇರೆಗೆ ಪ್ರಾಧಿಕಾರದ ದಿನಾಂಕ:25.10.2006ರ ಆದೇಶದಲ್ಲಿ ಸೊತ್ತುಗಳನ್ನು ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ದಕ್ಷಿಣ ಜಾರಿ ಮತ್ತು ತನಿಖೆ ಇವರಿಗೆ ಹಸ್ತಾಂತರಿಸಲು ಆದೇಶಿಸಲಾಗಿರುತ್ತದೆ. ಆ ಪ್ರಕಾರ ಮೊಕದ್ದಮೆಗೆ ಸಂಬಂಧಿಸಿದ ಸೊತ್ತು ಹಾಗೂ ಕಡತಗಳನ್ನು ದಿನಾಂಕ;15.04.2008ರಂದು ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ದಕ್ಷಿಣ ವಲಯ-1 ಇವರಿಗೆ ಹಸ್ತಾಂತರಿಸಲಾಗಿರುತ್ತದೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರು ನೋಂದಣಿ ಸಂಖ್ಯೆ: ಕೆಎ-19-ಎನ್-3985ರ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ಪೊಲೀಸ್ ಅಧಿಕಾರಿಯವರು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರಿಂದ ಪಡೆದು ಸಲ್ಲಿಸಿದ್ದು, ಸದರಿ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಯ ಪ್ರಕಾರ ನೊಂದಣಿ ಸಂಖ್ಯೆ: ಕೆಎ-19-ಎನ್-3985

ವಾಹನವು ಮಾರುತಿ 800 ಕಾರು ಆಗಿರದೇ ಮಾರುತಿ ಝೆನ್‌ಕಾರು ಎಂದು ದೃಢೀಕೃತವಾಗಿದೆ ಹಾಗೂ ಸದರಿ ಝೆನ್ ಕಾರಿನ ಆರ್.ಸಿ. ಮಾಲೀಕರು ಶ್ರೀಮತಿ ಪುಷ್ಪ ಗೋಪಾಲ ಎಂಬುದಾಗಿ ತಿಳಿಯಲಾಗಿದೆ.

ಮೊಕದ್ದಮೆಯ ತನಿಖೆಯನ್ನು ಪೊಲೀಸ್ ನಿರೀಕ್ಷಕರು, ಮಂಗಳೂರು ದಕ್ಷಿಣ ಪೊಲೀಸ್ ಠಾಣೆ ಇವರು ಮುಂದುವರಿಸಿ ಪ್ರಕರಣವನ್ನು ಜಪ್ತಾದ ಸಾರಾಯಿ ಸ್ಯಾಚೇಟುಗಳ ಮಾದರಿಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ, ವಿಶ್ಲೇಷಣಾ ವರದಿಯನ್ನು ಪ್ರಕರಣದ ತನಿಖಾಧಿಕಾರಿಗಳಾದ ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ದಕ್ಷಿಣ ವಲಯ–1 ಇವರಿಗೆ ನೀಡಿರುತ್ತಾರೆ. ಸದರಿ ರಾಸಾಯನಿಕ ಪರೀಕ್ಷಾ ಫಲಿತಾಂಶದ ವರದಿಯಲ್ಲಿ ಸಾರಾಯಿಯಲ್ಲಿ ಮದ್ಯಸಾರದ ಪ್ರಮಾಣ 36.0% ಇರುವುದಾಗಿ ದೃಢೀಕರಣ ನೀಡಿರುತ್ತಾರೆ. ಸದರಿ ಸಾರಾಯಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಹಾಗೂ ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನ ಮತ್ತು ಎಲ್.ಜಿ. ಕಂಪನಿಯ ಮೊಬೈಲ್ ಫೋನ್ ಸೆಟ್ಟನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ದಕ್ಷಿಣ ವಲಯ–1 ಇವರು ದಿನಾಂಕ:19.04.2008ರಂದು ಶಿಫಾರಸು ಮಾಡಿ ವರದಿ ಸಲ್ಲಿಸಿರುತ್ತಾರೆ. ಆ ಪ್ರಕಾರ ಪ್ರಕರಣದಲ್ಲಿ ಜಪ್ತಾದ 100 ಮಿಲಿಯ 5900 ಸಾರಾಯಿ ಸ್ಯಾಚೇಟು (ಮಾದರಿಗಳನ್ನು ಹೊರತು ಪಡಿಸಿ) ಗಳನ್ನು ಮತ್ತು ಎಲ್.ಜಿ. ಕಂಪೆನಿಯ ಮೊಬೈಲ್ ಸೆಟ್ಟನ್ನು ಪ್ರಾಧಿಕಾರದ ದಿನಾಂಕ:17.05.2008ರ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸಾರಾಯಿಯನ್ನು ಸೂಕ್ತ ಮಹಜರು ಜರುಗಿಸಿ ನಾಶಪಡಿಸಲಾಗಿರುತ್ತದೆ.

ಪ್ರಕರಣದಲ್ಲಿ ಜಪ್ತಾದ ವಾಹನ ಮಾರುತಿ 800 ಕಾರು ಸಂಖ್ಯೆ: ಕೆಎ–19–ಎನ್–3985 ಇದರ ಬಿ ರಿಜಿಸ್ಟಾರ್ ಎಕ್ಸ್‌ಟ್ರಾಕ್ಟ್ ವರದಿಯಲ್ಲಿ ವಾಹನ ಮಾರುತಿ ಝೆನ್ ಕಾರು ಎಂದು ದೃಢೀಕೃತವಾಗಿದ್ದು, ಆದಾಗ್ಯೂ ಸದರಿ ವರದಿಯ ಪ್ರಕಾರ ಮಾಲೀಕರಾದ ಶ್ರೀಮತಿ ಪುಷ್ಪ ಗೋಪಾಲ್, ಕೋಂ: ಎ. ಗೋಪಾಲ, ಕರ್ನಾಟಕ ಬ್ಯಾಂಕ್ ಲಿಮಿಟೆಡ್, ಕೊಡಿಯಾಲ್ ಬೈಲ್ ಬ್ರಾಂಚ್, ಮಂಗಳೂರು ಇವರಿಗೆ ಮತ್ತು ಪ್ರಕರಣದ ಆರೋಪಿತ ವ್ಯಕ್ತಿಗಳಿಗೆ ದಿನಾಂಕ:18.08.2008ರಂದು ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 43ಬಿ ಪ್ರಕಾರ ನೀಡಲಾದ ಕಾರಣ ಕೇಳಿ ನೋಟೀಸುಗಳು ವಾಹನದ ಮಾಲೀಕರಿಗೆ ಹಾಗೂ ಆರೋಪಿತ ವ್ಯಕ್ತಿಗಳಿಗೆ ಜಾರಿಯಾಗಿದ್ದು, ಶ್ರೀಮತಿ ಪುಷ್ಪ ಗೋಪಾಲ್ ಇವರು ದಿನಾಂಕ:02.09.2008ರಂದು ಪ್ರಾಧಿಕಾರಕ್ಕೆ ಉತ್ತರ ನೀಡಿ ತನ್ನ ಒಡೆತನದಲ್ಲಿರುವ ಕೆಎ–19–ಎನ್–3985 ಎಂಬ ನೋಂದಣಿ ಸಂಖ್ಯೆ ಇರುವ ಮಾರುತಿ ಝೆನ್ ಕಾರು ಖರೀದಿಸಿಕೊಂಡ ದಿನದಿಂದ ಈ ತನಕ ಯಾವುದೇ ಅಪರಾಧದಲ್ಲಿ ಶಾಮೀಲಾಗದೇ ತನ್ನ ಸುಪರ್ದಿಯಲ್ಲಿಯೇ ಇರುವುದರಿಂದ ಪೊಲೀಸ್ ಅಧಿಕಾರಿಗಳು ಅಬಕಾರಿ ಪ್ರಕರಣದಲ್ಲಿ ಜಪ್ತುಪಡಿಸಿಕೊಂಡಿರುವ ಕೆಎ–19–ಎನ್–3985 ಎಂಬ ಸಂಖ್ಯಾ ಫಲಕ ಇರುವ ಮಾರುತಿ 800 ಕಾರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ವಿಷಯದಲ್ಲಿ ಯಾವುದೇ ಆಕ್ಷೇಪ ಇರುವುದಿಲ್ಲವೆಂದು ತಿಳಿಸಿರುತ್ತಾರೆ. ಹಾಗೂ ಪ್ರಕರಣದ ಆರೋಪಿತ ವ್ಯಕ್ತಿಗಳಿಗೆ ನೀಡಲಾದ ಕಾರಣ ಕೇಳಿ ನೋಟೀಸುಗಳು ಕ್ರಮವಾಗಿ ದಿನಾಂಕ:06.09.2008 ಮತ್ತು ದಿನಾಂಕ:08.09.2008 ರಂದು ಜಾರಿಯಾಗಿದ್ದರೂ, ಸದರಿಯವರಿಂದ ಯಾವುದೇ ಉತ್ತರ ಈ ಪ್ರಾಧಿಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ, ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿದೆಯೆಂದು ಸಾಕ್ಷಾಧಾರಗಳೊಂದಿಗೆ ಸಾಬೀತುಪಡಿಸದೇ ಇದ್ದಲ್ಲಿ, ಸದರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ಸಿ ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ ಅಂತಹ ಸೊತ್ತುಗಳನ್ನು ಕಲಂ 43ಸಿ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಪ್ರಾಧಿಕಾರದಲ್ಲಿ ಲಭ್ಯವಾಗಿರುವ ದಾಖಲಾತಿಗಳ ಪ್ರಕಾರ ದಿನಾಂಕ:14.06.2005ರಂದು ಕೆಎ–19–ಎನ್–3985 ಎಂದು ನಕಲಿ ಸಂಖ್ಯಾ ಫಲಕ ಹೊಂದಿರುವ ಮಾರುತಿ 800 ಕಾರು ಇದರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ ಚಾಲಕ ಮತ್ತು ಇನ್ನೊರ್ವ ವ್ಯಕ್ತಿ 590.000 ಲೀ (100 ಎಂಎಲ್‌ನ 5900 ಸಾರಾಯಿ ಸ್ಯಾಚೇಟುಗಳು) ಸಾರಾಯಿಯನ್ನು ಸಾಗಾಟ ಮಾಡುತ್ತಿದ್ದುದನ್ನು ಪೊಲೀಸ್ ನಿರೀಕ್ಷಕರು, ಮಂಗಳೂರು ದಕ್ಷಿಣ ಪೊಲೀಸ್ ಠಾಣೆ, ಮಂಗಳೂರುರವರು ಪತ್ತೆಹಚ್ಚಿ, ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಲಾದ ವಾಹನ ಮತ್ತು ಸೊತ್ತುಗಳನ್ನು ಸ್ಥಳ ಮಹಜರು, ಪಂಚನಾಮೆಯ ಮುಖೇನ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತು ಮಾಡಲ್ಪಟ್ಟಿರುವ ಸಾರಾಯಿ ಮಾದರಿಗಳು ರಾಸಾಯನಿಕ ತಜ್ಞರ ವರದಿಯಂತೆ ಸಾರಾಯಿಯೆಂದು ದೃಢಪಟ್ಟಿರುವುದರಿಂದ, ಕರ್ನಾಟಕ ಅಬಕಾರಿ ಕಾಯಿದೆ ಕಲಂ 32, 34ರ ಪ್ರಕಾರ ಶಿಕ್ಷಾರ್ಹ ಅಪರಾಧ ಎಸಗಿರುವುದರಿಂದ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಪಡೆದ ಬಿ ರಿಜಿಸ್ಟಾರ್ ವರದಿಗೂ ಜಪ್ತು ಪಡಿಸಿಕೊಂಡ ವಾಹನಕ್ಕೂ ತಾಳೆ ಕಂಡು ಬಾರದೇ ಇರುವುದರಿಂದ, ವಾಹನಕ್ಕೆ ಅಕ್ರಮ ಸಂದರ್ಭದಲ್ಲಿ ಆರೋಪಿಗಳು ದುರುದ್ದೇಶದಿಂದ ನಕಲಿ ಸಂಖ್ಯಾ ಫಲಕವನ್ನು ಅಳವಡಿಸಿಕೊಂಡು, ತಿಳುವಳಿಕೆಯಿಂದಲೇ ವಾಹನವನ್ನು ಅಕ್ರಮವಾಗಿ ಸಾರಾಯಿ ಸಾಗಾಣಿಕೆಗೆ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ವಾಹನದ ಮುಟ್ಟುಗೋಲು ನಡವಳಿ ಬಗ್ಗೆ ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಕೆಎ–19–ಎನ್–3985 ಎಂದು ನಕಲಿ ಸಂಖ್ಯಾ ಫಲಕ ಹೊಂದಿರುವ ಮಾರುತಿ 800 ಕಾರನ್ನು ವಶಪಡಿಸಿಕೊಂಡು ಸುಮಾರು 3 ವರ್ಷ 6 ತಿಂಗಳು ಕಳೆದರೂ ವಾಹನ ಮಾಲೀಕರು ತಮ್ಮ ವಾಹನದ ಒಡೆತನವನ್ನು ಸಾಬೀತುಪಡಿಸಿಕೊಂಡು ಸಮಜಾಯಿಷಿಯನ್ನು ನೀಡಿರುವುದಿಲ್ಲ. ಹಾಗೂ ಮಾಲೀಕತ್ವವನ್ನು ಕೋರಿ ಯಾವುದೇ ಅರ್ಜಿಯನ್ನು ವಾಹನದ ಸಂಬಂಧ ಪಟ್ಟ ದಾಖಲಾತಿಗಳೊಂದಿಗೆ ಈ ಪ್ರಾಧಿಕಾರಕ್ಕೆ ಹಾಜರುಪಡಿಸಿರುವುದಿಲ್ಲ. ಈ ಕಾರಣದಿಂದಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಆರೋಪಿತ ವ್ಯಕ್ತಿಗಳೊಂದಿಗೆ ವಾಹನದ ಮಾಲೀಕರ ಶಾಮೀಲಾತಿ ಹಾಗೂ ತಿಳುವಳಿಕೆಯಿಂದಲೇ ವಾಹನಕ್ಕೆ ನಕಲಿ ಸಂಖ್ಯಾ ಫಲಕವನ್ನು ಅಳವಡಿಸಿಕೊಂಡು ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿರುವುದು ಕಂಡು ಬರುತ್ತದೆ. ಅಲ್ಲದೇ ವಾಹನವನ್ನು ಪಡೆಯಲು ಮತ್ತು ತಕ್ಷೀರನ್ನು ನಡೆಸಲು ಉತ್ಸುಕರಾಗಿಲ್ಲ ಎಂಬುದಾಗಿ ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ. ಪೊಲೀಸ್ ನಿರೀಕ್ಷಕರು, ಮಂಗಳೂರು ದಕ್ಷಿಣ ಪೊಲೀಸ್ ಠಾಣೆರವರು ಸದರಿ ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಣಿಕೆ ಮಾಡುತ್ತಿರುವುದನ್ನು ಪತ್ತೆ ಹಚ್ಚಿ, ಸ್ಥಳ ಮಹಜರಿನ ಮೂಲಕ ಸಾಗಾಣಿಕೆಗೆ ಬಳಸಿದ ವಾಹನವನ್ನು ಹಾಗೂ ಅಕ್ರಮ ಸಾರಾಯಿಯನ್ನು ಜಪ್ತು ಪಡಿಸಿರುವುದು ಮತ್ತು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ಜಪ್ತು ಪಡಿಸಲಾದ 5900 ಸ್ಯಾಚೇಟುಗಳು ಸಾರಾಯಿಯೆಂದು ದೃಢೀಕೃತವಾಗಿರುವುದರಿಂದ ಇದು ಅಕ್ರಮವಾಗಿ ಸಾರಾಯಿಯನ್ನು ನಕಲಿ ನಂಬರನ್ನು ಬಳಸಿ ವಾಹನದಲ್ಲಿ ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಈ ಮೇಲಿನ ಎಲ್ಲಾ ದಾಖಲಾತಿಗಳಿಂದ ಸಾಬೀತಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಪೊಲೀಸ್ ನಿರೀಕ್ಷಕರು, ಮಂಗಳೂರು ದಕ್ಷಿಣ ಪೊಲೀಸ್ ಠಾಣೆ, ಮಂಗಳೂರು ಇವರು ವಶಪಡಿಸಿಕೊಂಡ ಕೆಎ–19–ಎನ್–3985 ನಕಲಿ ಸಂಖ್ಯಾ ಫಲಕ ಹೊಂದಿರುವ ಮಾರುತಿ 800 ಕಾರನ್ನು ವಶಪಡಿಸಿಕೊಂಡು ಸುಮಾರು 3 ವರ್ಷ 6 ತಿಂಗಳಿಗಿಂತ ಹೆಚ್ಚು ಸಮಯ ಕಳೆದಿದ್ದು, ಆದರೆ ಯಾವುದೇ ವ್ಯಕ್ತಿಯು ಸೂಕ್ತ ದಾಖಲಾತಿಗಳೊಂದಿಗೆ ವಾಹನದ ಮಾಲೀಕತ್ವವನ್ನು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಕಾರಣ ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿದ ಕೆಎ–19–ಎನ್–3985 ನಕಲಿ ಸಂಖ್ಯಾ ಫಲಕ ಹೊಂದಿರುವ ಮಾರುತಿ 800 ಕಾರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡುವುದು ಯೋಗ್ಯವೆಂದು ಕಂಡುಬಂದ ಹಿನ್ನೆಲೆಯಲ್ಲಿ ಈ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ನೇ ಕಲಂ 43ಬಿ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಲಂ 43ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪೊಲೀಸ್ ನಿರೀಕ್ಷಕರು, ಮಂಗಳೂರು ದಕ್ಷಿಣ ಪೊಲೀಸ್ ಠಾಣೆ, ಮಂಗಳೂರು ಇವರ ಕ್ರೈಂ ಸಂಖ್ಯೆ:206/2005, ದಿನಾಂಕ:14.06.2005ರಲ್ಲಿ ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿದ ಕೆಎ–19–ಎನ್–3985 ನಕಲಿ ಸಂಖ್ಯಾ ಫಲಕ ಹೊಂದಿರುವ ಮಾರುತಿ 800 (ಚಾಸೀಸ್ ಸಂಖ್ಯೆ:1683538 ಮತ್ತು ಇಂಜಿನ್ ಸಂಖ್ಯೆ:2347207) ಕಾರನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಸಿ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ. ಸದರಿ ನೊಂದಣಿ ಸಂಖ್ಯೆಯ ಕೆಎ–19–ಎನ್–3985 ರ ನೈಜ ಸಂಖ್ಯೆ ಹೊಂದಿರುವ ಮಾರುತಿ ಝೆನ್ ಕಾರಿನ ಆರ್.ಸಿ. ಮಾಲೀಕರಾದ ಶ್ರೀಮತಿ ಪುಷ್ಪ ಇವರ ಝೆನ್ ಕಾರನ್ನು ಈ ಮುಟ್ಟುಗೋಲು ನಡವಳಿಗಳಿಂದ ಹೊರತುಪಡಿಸಿ, ಸದರಿ ವಾಹನಕ್ಕೆ ಈ ಪ್ರಾಧಿಕಾರದ ಯಾವುದೇ ಬಾಧೆ ಹಾಗೂ ಹೊಣೆ ಇರುವುದಿಲ್ಲವೆಂದು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ:22.12.2008ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**

ಪಿ.ಆರ್.82

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

## ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು, ನಿರ್ದೇಶಕರ ನಡವಳಿ

**ವಿಷಯ:** ಹಾಸನ ಜಿಲ್ಲೆ ಸಕಲೇಶಪುರ ತಾಲ್ಲೂಕು, ಚಿಕ್ಕಕಲ್ಲೂರ್ ಗ್ರಾಮದ ಸರ್ವೆ ನಂ.23ರಲ್ಲಿ 10 ಎಕರೆಗೆ ಮಲ್ಟಿಕಲರ್ ಶಿಲೆಗಾಗಿ ಶ್ರೀ ಕೆ.ಪಿ.ಅಹಮದ್ ರವರಿಗೆ ಮಂಜೂರಾಗಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ:427ನ್ನು ಪುನರ್ ಸ್ಥಾಪಿಸಿರುವ ಬಗ್ಗೆ.

**ಪ್ರಸ್ತಾವನೆ:**

ಹಾಸನ ಜಿಲ್ಲೆ, ಸಕಲೇಶಪುರ ತಾಲ್ಲೂಕು, ಚಿಕ್ಕಕಲ್ಲೂರ್ ಗ್ರಾಮದ ಸರ್ವೆ ನಂ.23ರಲ್ಲಿ 10 ಎಕರೆ ವಿಸ್ತೀರ್ಣದಲ್ಲಿ ಮಲ್ಟಿಕಲರ್ ಶಿಲೆಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 427ರ ಗುತ್ತಿಗೆಯನ್ನು ಶ್ರೀ ಕೆ.ಪಿ. ಅಹಮದ್ ರವರ ಹೆಸರಿನಲ್ಲಿ ದಿನಾಂಕ:28.03.2001 ರಿಂದ 10 ವರ್ಷಗಳಿಗಾಗಿ ಮಂಜೂರು ಮಾಡಲಾಗಿತ್ತು. ಗುತ್ತಿಗೆದಾರರು ಗುತ್ತಿಗೆ ಮೇಲಿನ ಬಾಕಿಯನ್ನು ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿದ ಕಾರಣ ದಿನಾಂಕ:09.01.2008 ರಿಂದ ಜಾರಿಗೆ ಬರುವಂತೆ ನಿರ್ದೇಶಕರಿಗೆ ಪ್ರದತ್ತವಾದ ಅಧಿಕಾರದಡಿಯಲ್ಲಿ ಕರ್ನಾಟಕ ಉಪ ಖನಿಜ ರಿಯಾಯತಿ ನಿಯಮಾವಳಿ 1994ರ ನಿಯಮ 6(1) ಮತ್ತು 39 ರಡಿಯಲ್ಲಿ ಗುತ್ತಿಗೆಯನ್ನು ರದ್ದುಗೊಳಿಸಲಾಗಿತ್ತು.

